# ಚಂದಾದಾರರಲ್ಲಿ ನಿವೇದನೆ.

ಪ್ರತಿಭಾ ಗ್ರಂಥಮಾಲೆಯು ಒಂಬತ್ತನೆಯ ವರುಷವು ಈ 'ಹೊಸ ಜೀಕಿ' ಯೊಂದಿಗೆ ಪೂರ್ತಿಯಾಗುತ್ತಿದೆ. ಈ ವರುಷ ಐದು ಕಾದಂಬರಿಗಳನ್ನೂ ಒಂದು ಕಥಾಸಂಕಲನವನ್ನೂ ಚಂದಾದಾರರಿಗೆ ಸಲ್ಲಿಸಿದಂತಾಯ್ತು. ಯೋಜನೆಯಂತೆ ಮಾಲೆಯು ಒಂಬತ್ತುನೂರು ಪುಟ ಸಾಹಿತ್ಯವನ್ನು ಸಕಾಲಕ್ಕೆ ನೀಡಿದೆಯೆಂದು ತಿಳಿಸಲು ಅಭಿಮಾನಪಡುತ್ತದೆ. ಜನೆವರಿ ೧೯೫೩ಕ್ಕೆ ಹೊಸವರ್ಷಾರಂಭವಾಗುವದು.

ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿಯೂ ನಮ್ಮ ನಿಯಮಿತವಾದ ಸೇವೆಯನ್ನು ಮೆಚ್ಚಿ ಕನ್ನಡಾಭಿಮಾನಿಗಳು ಕೊಡುತ್ತಿರುವ ಬೆಂಬಲವೇ ಇದಕ್ಕೆ ಕಾರಣವಾಗಿದೆ.

ಆದಷ್ಟು ಸುಂದರವಾದ ಕೃತಿಗಳನ್ನೇ ಪ್ರಕಟಿಸಬೇಕೆಂದು ಮಾಲೆಯು ನಿರ್ಧರಿಸಿದೆ. ಬರುವ ವರುಷದಲ್ಲಿ ಶ್ರೀ. ಅ. ನ. ಕೃಷ್ಣರಾಯರು, ಶ್ರೀ. ಬಸವರಾಜ ಕಟ್ಟೀಮನಿ, ಶ್ರೀ. ಕೃಷ್ಣಮೂರ್ತಿ ಪುರಾಣಿಕ, ಶ್ರೀ. ನೇವ ನಮಿರಾಜ ಮಲ್ಲ, ಶ್ರೀ ಜನಾರ್ದನ ಗುರ್ಕಾರ್ ಮೊದಲಾದ ಹೆಸರಾಂತ ಲೇಖಕರ ಉತ್ತಮ ಕಾದಂಬರಿಗಳನ್ನು ಪ್ರಕಟಿಸಬೇಕೆಂದು ನಿರ್ಧರಿಸಲಾಗಿದೆಯೆಂದು ಅರಿಕೆ ಮಾಡಿಕೊಳ್ಳಲು ಸಂತೋಷವಾಗುತ್ತದೆ.

ಪ್ರತಿ ಪುಸ್ತಕಕ್ಕೂ ದ್ವಿವರ್ಣ ಚಿತ್ರವುಳ್ಳ ರಕ್ಷಾಪತ್ರದ ಏರ್ಪಾಡುಮಾಡಿದ್ದೇವೆ. ಹೊಸ ವರುಷದ ಹೊಸ ಯೋಜನೆಯಿದು. ಆದುದರಿಂದ ಈಗಿದ್ದ ಎಲ್ಲ ಚಂದಾದಾರರು ಶಾಶ್ವತ ಉಳಿಯಬೇಕೆಂದೂ ಮತ್ತೆ ಹೊಸ ಹೊಸ ಜನರು ಚಂದಾದಾರರಾಗಿ ಪ್ರೋತ್ಸಾಹಿಸಬೇಕೆಂದೂ ಬೇಡಿಕೊಳ್ಳುತ್ತೇವೆ.

ಈ ಕಥಾಸಂಕಲವನ್ನು ಕೊಟ್ಟು ಮಾಲೆಗೆ ಸಹಾಯ ಮಾಡಿದ ಶ್ರೀ. ವೆಂ. ಮು. ಜೋಶಿಯವರಿಗೂ, ಮುನ್ನುಡಿಕಾರರಾದ ಶ್ರೀ. ಬೆಟಗೇರಿ ಕೃಷ್ಣಶರ್ಮರಿಗೂ ಮತ್ತು ಚಿತ್ರಕಾರರಾದ ಶ್ರೀ. ಮೂರ್ತಿಯವರಿಗೂ ಕೃತಜ್ಞರಾಗಿದ್ದೇವೆ.

**ಭಾಲಚಂದ್ರ ಘಾಣೇಕರ**

ಬಡತನದ ಬೇಗೆಯಿಂದ ನನ್ನ ಶಿಕ್ಷಣ ಅಪೂರ್ತಿ
ಯಾಗುವ ಅಂಜಿಕೆ ಇದ್ದಾಗ
ಸಹಾಯ ಮಾಡಿದ
ಉದಾರ ಹೃದಯಿಗಳಾದ

**ಗದುಗಿನ**

**ಡಾಕ್ಟರ್ ದ. ವಾ. ಚಾಫೇಕರ**

ಮತ್ತು

**ಸೌ. ಅನ್ನಪೂರ್ಣಾತಾಯಿ ಚಾಫೇಕರ**

ಇವರಿಗೆ

**ಅರ್ಪಿತ.**

# ಅರಿಕೆ.

ನನ್ನ ಮೊದಲ ಕಥಾಸಂಕಲನ "ಚಿನ್ನದ ಪದಕ" ಅಚ್ಚಾಗಿ ಒಂದು ವರುಷ ಸಂದಿದ ಮೇಲೆ ಇದೀಗ ಎರಡನೆಯ ಕಥಾಸಂಕಲನ "ಹೊಸ ಬೆಳಕು" ಬೆಳಕಿಗೆ ಬರುತ್ತಲಿದೆ. ಕತೆಗಳ ಮೊದಲು 'ಅರಿಕೆ' ಎಂದು ಹೇಳಿ ಪುಟಪುಟಗಳನ್ನು ತುಂಬಿ ಕೊಡುವದು ನನಗೆ ಸೇರದು. ನನ್ನ ಕಥೆಗಳ ಬಗ್ಗೆ ನಾನೇನು ಹೆಚ್ಚಿಗೆ ಹೇಳಲಾರೆ. ಆ ಕೆಲಸ ಸಹೃದಯ ವಾಚಕರದು, ನಿಸ್ಸಂಗ ಮನೋವೃತ್ತಿಯ ವಿಮರ್ಶಕರದು.

ಒಂದು ಮಾತನ್ನು ಹೇಳಬಹುದು. 'ಹೊಸ ಬೆಳಕಿ' ನಲ್ಲಿ ಕಾಣುವ ಕತೆಗಳೆಲ್ಲವೂ ಹೊಸ ರೀತಿಯಲ್ಲಿ ಮೂಡಿ ಬಂದಿದೆ. ಅನುಭವ ಹೆಚ್ಚಾದಂತೆ ಕತೆಗಳಲ್ಲಿ ಪರಿಪಕ್ವತೆ ಕಾಣಬರುತ್ತದೆ. ಲೇಖಕನ ಪ್ರತಿಭೆ ಹೂವಿನಷ್ಟು ಕೋಮಲವಲ್ಲ, ಕಬ್ಬಿಣದಷ್ಟು ಕಠಿಣ. ಸಾಂಸ್ಕೃತಿಕ ಹಿನ್ನೆಲೆ, ಶಿಕ್ಷಣದ ಪರಿಣಾಮ, ಜೀವನದಲ್ಲಿಯ ಸಿಹಿ ಕಹಿ ಅನುಭವ, ವಿವಿಧ ವಾಚನದ ಪರಿಣಾಮ, ಸಮಾಜದಲ್ಲಿಯ ಸ್ಥಿತ್ಯಂತರದ ಪರಿಣಾಮ ಇವೆಲ್ಲವುಗಳ ಮಿಶ್ರಣದ ಕಾವಿನಿಂದ ಲೇಖಕನ ಪ್ರತಿಭೆ ಕಾಯ್ದು ರಸವಾಗುತ್ತದೆ. ಆ ಎರಕದಿಂದಲೇ ಸುಂದರ ಕತೆಗಳ ನಿರ್ಮಾಣವಾಗುತ್ತದೆ. 'ಹೊಸ ಬೆಳಕಿ' ನಲ್ಲಿಯ ಕತೆಗಳಲ್ಲಿ ಅಂಥ ಮಿಶ್ರಣದ ಕೆಲವಂಶವಾದರೂ ಇದೆ ಎಂಬುದು ನನ್ನ ಮನವರಿಕೆ.

ಈ ಸಂಕಲನವನ್ನು ನನ್ನ ಗೆಳೆಯ ಶ್ರೀ. ಭಾಲಚಂದ್ರ ಘಾಣೇಕರರೇ ತಮ್ಮ ಮಾಲೆಯಲ್ಲಿ ಪೋಣಿಸಿ ಉಪಕಾರಮಾಡಿದ್ದಾರೆ. ಅವರಿಗೆ ನನ್ನ ಅನಂತ ವಂದನೆಗಳು.

ಶ್ರೀ. ಕವಿಭೂಷಣ ಬೆಟಗೇರಿ ಕೃಷ್ಣಶರ್ಮರು ತಮ್ಮ ಮಹತ್ವದ ಕೆಲಸಗಳನ್ನು ಬದಿಗಿರಿಸಿ ಈ ಕಥಾಸಂಗ್ರಹಕ್ಕೆ ಸುಂದರವಾದ ವಿಸ್ತೃತ ವಿಮರ್ಶಾತ್ಮಕ ಮುನ್ನುಡಿಯನ್ನು ಬರೆದುಕೊಟ್ಟು ತುಂಬಾ ಉಪಕಾರ ಮಾಡಿದ್ದಾರೆ. ಅವರಿಗೆ ನಾನೆಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಕಡಿಮೆಯೇ.

ದತ್ತ ಜಯಂತಿ,
೧೯೫೨
ಧಾರವಾಡ.

**ವೆಂ. ಮು. ಜೋಶಿ.**

# ಮುನ್ನುಡಿ.

ನಮ್ಮ ಜೀವನದಲ್ಲಿಯ ಯಾವುದೇ ಸಾಮಾನ್ಯ ಘಟನೆಯಿರಲಿ, ಹೇಳುವವನ ಚಾತುರ್ಯದಿಂದ ಅದೊಂದು ಸ್ವಾರಸ್ಯವಾದ ಕತೆಯಾಗಿ ರೂಪುಗೊಂಡು ನಿಲ್ಲಬಹುದು. ಒಂದು ವಿಶಿಷ್ಟ ಘಟನೆಯನ್ನು ಹಲವಾರು ಜನರು ಕಣ್ಣಾರೆ ಕಂಡಿರುವರು. ಆದರೆ ಆ ಘಟನೆಯಲ್ಲಿಯ ವೈಶಿಷ್ಟ್ಯವನ್ನು ಕಂಡುಹಿಡಿದು ಅದರ ಮೇಲೆ ಬೆಳಕು ಕೆಡಹಿ, ಅದರ ಬೆಳಕು ಹೆಚ್ಚಾಗಿ ತೋರುವಂತೆ ಕಂಡವರಿಗೆಲ್ಲ ಹೇಳಲಿಕ್ಕೆ ಸಾಧ್ಯವಿರುವುದಿಲ್ಲ ಇದು ಸಾಧ್ಯವಿದ್ದವನು ಖಂಡಿತವಾಗಿ ಕತೆಗಾರನಾಗಬಲ್ಲನು. ಸಾಮಾನ್ಯ ಘಟನೆಯನ್ನೂ ರಸವತ್ತಾಗಿ ಕತೆಮಾಡಿ ಹೇಳಬಲ್ಲ ಕತೆಗಾರ, ಜೀವನದಲ್ಲಿಯ ವೈಚಿತ್ರ್ಯಪೂರ್ಣ ಘಟನೆಗಳನ್ನು ಎಷ್ಟೊಂದು ಸುಂದರವಾದ ಕತೆಗಳನ್ನಾಗಿ ಹೇಳಲಾರ? ಶ್ರೀಯುತ ವೆಂ. ಮು. ಜೋಶಿಯವರು ವಯಸ್ಸಿನಿಂದ ತರುಣರಾದರೂ ಅನೇಕ ಜನ ಹಿರಿಯರಿಗಿಂತ ಜೀವನದ ಕಹಿ ಸಿಹಿ ಅನುಭವಗಳನ್ನು ಹೆಚ್ಚಾಗಿ ಕಂಡವರಿದ್ದಾರೆ; ಉಂಡವರಿದ್ದಾರೆ.

ಕಳೆದ ಮಹಾ ಯುದ್ಧದಲ್ಲಿ ಸೈನಿಕರಾಗಿ ಕೆಲಸ ಮಾಡಿದ ಕತೆಗಾರ ಜೋಶಿಯವರು ಭಾರತದ ಅನೇಕ ಭಾಗಗಳನ್ನು ಸುತ್ತಿ ಅಲ್ಲಲ್ಲಿಯ ಪರಿಸ್ಥಿತಿಗಳನ್ನು ಕಣ್ಣಾರೆ ಕಂಡಿದ್ದಾರೆ. ಇಷ್ಟೇ ಅಲ್ಲ, ಪ್ರತ್ಯಕ್ಷ ಯುದ್ಧರಂಗದಲ್ಲಿ ಭಾಗ ವಹಿಸಿ ಬ್ರಹ್ಮದೇಶ ಮಲಯಾಗಳಲ್ಲಿ ಓಡಾಡಿ ಬಂದವರಾಗಿದ್ದಾರೆ. ಸ್ವಾಭಾವಿಕ ಸಾಹಿತ್ಯಪ್ರಿಯರಾದ ಶ್ರೀ. ಜೋಶಿಯವರು ನೋಡಿದುದನ್ನು ಬರಿ ಹೊರಗಣ್ಣಿಂದ ನೋಡಿ ಬಿಡದೆ, ಒಳಗಣ್ಣಿಂದ ನೋಡಿ ಮನದ ತೆರೆಯಮೇಲೆ ಮೂಡಿಸಿಕೊಂಡು ಬಿಟ್ಟಿದ್ದಾರೆ. ಆದುದರಿಂದಲೇ ಈ ಕತೆಗಾರರು ತಮ್ಮ ಕಥಾವಸ್ತುವಿಗೆ ಯಾವುದೇ ಭೌಗೋಲಿಕ ಹಿನ್ನೆಲೆಯನ್ನು ತೆಗೆದುಕೊಂಡರೂ ಅದನ್ನು ಯಥಾವತ್ತಾಗಿ ಚಿತ್ರಿಸಿ ತೋರಿಸಬಲ್ಲರು. ಅನೇಕ ಸಲ ಇವರ ಕತೆಗಳು ಪ್ರಾದೇಶಿಕ ಹಿನ್ನೆಲೆಯ ಚಿತ್ರಣದ ಮೂಲಕವಾಗಿಯೇ ವೈಶಿಷ್ಟ್ಯಪೂರ್ಣವಾಗಿ ತೋರಿ ವಾಚಕರ ಮನಸ್ಸನ್ನು ಕುತೂಹಲಗೊಳಿಸುವುವು.

ಈ ಕತೆಗಾರರು ಹೆಚ್ಚಾಗಿ ವಾಸ್ತವ ಮಾರ್ಗಾವಲಂಬಿಗಳು. ಎಂತಲೇ ತಮ್ಮ ಕತೆಗಳಿಗಾಗಿ ವಸ್ತುಗಳನ್ನು ಕಲ್ಪಿಸುತ್ತ ಕೂಡುವವರಲ್ಲ. ಜಿವನದಲ್ಲಿ

ಕಣ್ಣಾರೆ ಕಂಡ—ಕಿವಿಗಳಿಂದ ಕೇಳಿದ—ವಾಸ್ತವ ಸಂಗತಿಗಳಿಂದಲೇ ವಸ್ತು ಗಳನ್ನು ಆಯ್ದುಕೊಳ್ಳುವವರು. ಆ ವಸ್ತುವಿಗೆ ತಕ್ಕ ಪಾತ್ರಗಳನ್ನು ಸೃಷ್ಟಿಸಿ ಆ ಪಾತ್ರಗಳ ಸ್ವಭಾವ ವೈಶಿಷ್ಟ್ಯವು ಆ ಮುಖ್ಯ ಘಟನೆಗೆ ಹೇಗೆ ಕಾರಣವಾದು ವೆಂಬುದನ್ನು ಹೇಳಲು ಹವಣಿಸುವವರು. ಈ ಸಂಗ್ರಹದಲ್ಲಿಯ ಒಂಬತ್ತು ಕತೆಗಳಲ್ಲಿಯೂ ಕಂಡುಬರುವ ಮುಖ್ಯ ಘಟನೆಗಳು ಬಹಳ ಜನರಿಗೆ ಕಂಡು ಕೇಳಿದ ಘಟನೆಗಳಾಗಿ ತೋರಬಹುದು. ಎಂತಲೇ ಈ ಕತೆಗಳಲ್ಲಿ ಬರುವ ಪಾತ್ರಗಳನ್ನು ವಾಸ್ತವ ವ್ಯಕ್ತಿಗಳಿಗೆ ಹೋಲಿಸಿ ನೋಡುವ ತವಕವೂ ಉಂಟಾ ಗಬಹುದು. ಇದೊಂದು ವಾಸ್ತವ ಮಾರ್ಗದ ಸಾಹಿತ್ಯದ ವೈಲಕ್ಷಣ್ಯ. ಆದುದರಿಂದಲೆ ವಾಚಕರು ಇವನ್ನೆಲ್ಲ ಕತೆಗಳೆಂದು ಓದಬೇಕೇ ಹೊರತು ನಡೆದ ಸಂಗತಿಯು ಸತ್ಯಸ್ಥಿತಿಯೆಂದು ತಿಳಿಯಲಾಗದು.

ಇಂದು ಪ್ರಪಂಚದ ಯಾವ ಭಾಷೆಯು ಸಾಹಿತ್ಯದಲ್ಲಿಯೂ ಸಾಮಾಜಿಕ ಪ್ರಜ್ಞೆಗೆ ಪ್ರಮುಖವಾದ ಸ್ಥಾನವನ್ನು ಕೊಡಲಾಗುತ್ತಿದೆ. ವಿಜ್ಞಾನದ ಪ್ರಗ ತಿಯು ಇಂದು ಎಲ್ಲ ದೇಶಗಳಲ್ಲಿಯೂ ಹಳೆಯ ಸಾಮಾಜಿಕ ಕಟ್ಟು–ಕಟ್ಟಳೆ ಗಳನ್ನು ಸಡಲಿಸಿ ಬಿಟ್ಟುದರಿಂದ. ಎಲ್ಲ ದೇಶಗಳಲ್ಲಿಯೂ ಒಂದಿಲ್ಲೊಂದು ಬಗೆ ಯಾಗಿ ಸಾಮಾಜಿಕ ವೈಷಮ್ಯ-ಅಶಾಂತಿಗಳು ತಾಂಡವವಾಡುತ್ತಲಿವೆಯೆಂಬು ದನ್ನು ಬೇರೆಯಾಗಿ ಹೇಳಬೇಕಾಗಿಯೆ ಇಲ್ಲ. ಆದುದರಿಂದಲೇ ಎಲ್ಲದೇಶದ ಸಾಹಿತ್ಯಕರೂ ಇಂದು ಸಮಾಜದ ಸಮತೆ–ಶಾಂತಿಗಳಿಗಾಗಿ ಪ್ರಚಾರವನ್ನು ತಮ್ಮ ಸಾಹಿತ್ಯ ನಿರ್ಮಿತಿಯ ಮೂಲಕ ನಡೆಯಿಸಿದ್ದಾರೆ. ಸಮತೆ–ಶಾಂತಿ ಗಳಿದ್ದಾಗ ಸಾಹಿತ್ಯ ಸೌಂದರ್ಯಸಿದ್ಧಿ–ಸೌಂದರ್ಯದರ್ಶನಗಳ ಕಾರ್ಯ ಮಾಡುವುದು; ವೈಷಮ್ಯ–ಅಶಾಂತಿಗಳಿದ್ದಲ್ಲಿ ವ್ಯಕ್ತಿಧರ್ಮ–ಸಮೂಹ ಧರ್ಮ ಗಳ ಪ್ರಚಾರ ಕಾರ್ಯ ಮಾಡಬೇಕಾಗುವುದು. ಆಧುನಿಕ ಕನ್ನಡ ಸಾಹಿ ತ್ಯವೂ ಈ ಜಾಗತಿಕ ಚಟುವಟಿಕೆಯಲ್ಲೇ ಭಾಗ ವಹಿಸಿದೆಯೆಂದು ಹೇಳಿದರೆ ಇದನ್ನು ಯಾರೂ ಒಪ್ಪಿಕೊಳ್ಳದಿರಲಾರರು. ಶ್ರೀ. ಜೋಶಿಯವರೂ ತರುಣ ಕನ್ನಡ ಕತೆಗಾರರು. ಅವರ ಮನಸ್ಸು–ಬುದ್ಧಿಗಳನ್ನು ಕೆರಳಿಸಿದುದು ಇಂದಿನ ಸಾಮಾಜಿಕ ಪರಿಸ್ಥಿತಿಯ ಪ್ರಭಾವವೇ ಎಂಬುದನ್ನು ಇಲ್ಲಿಯ ಪ್ರತಿಯೊಂದು ಕತೆಯಲ್ಲಿಯೂ ನೋಡಬಹುದು.

ಇಂದು ಸಮಾಜದ ವೈಷಮ್ಯಕ್ಕೆ ಕಾರಣವಾದುವೆಂದರೆ ಹೆಣ್ಣು– ಗಂಡಿನ

ಹೊಂದಿಕೆಯ ತೊಡಕು; ಬಡತನ–ಸಿರಿತನಗಳಲ್ಲಿಯ ಜಗಳಾಟ; ಅಧಿಕಾರ–ಅನಧಿಕಾರಗಳಲ್ಲಿಯ ಹೋರಾಟ. ಇವೇ ಮೂರು ಪ್ರಮುಖವಾದ ಪ್ರಶ್ನೆಗಳು ಎಲ್ಲೆಲ್ಲಿಯೂ ತಲೆಹೊರೆಯಾಗಿ ಕುಳಿತಿವೆ. ಹೆಣ್ಣು-ಗಂಡಿನ ತೊಡಕಿನ ಮೂಲಕ ವ್ಯಕ್ತಿ-ವ್ಯಕ್ತಿಗಳಲ್ಲಿ ಅತೃಪ್ತಿ ಹೆಚ್ಚುತ್ತಲಿದೆ. ಬಡತನ-ಸಿರಿತನಗಳ ಕಾರಣಗಳ ಮೂಲಕ ಕುಟುಂಬ ಕುಟುಂಬಗಳಲ್ಲಿಯೂ ಅಶಾಂತಿ ತಲೆದೋರುತ್ತಿದೆ. ಅಧಿಕಾರ-ಅನಧಿಕಾರಗಳ ಮೂಲಕ ರಾಷ್ಟ್ರ–ರಾಷ್ಟ್ರಗಳಲ್ಲಿ ದ್ವೇಷ-ಮತ್ಸರಗಳು ಹೆಚ್ಚುತ್ತಲಿವೆ. ವರ್ತಮಾನ ಸಾಹಿತ್ಯಿಕರ ಲಲಿತ ಸಾಹಿತ್ಯಕ್ಕಾಗಲಿ, ವಿಚಾರ ಸಾಹಿತ್ಯಕ್ಕಾಗಲಿ—ಇವೇ ಮೂರು ಸಮಸ್ಯೆಗಳೇ ಮುಖ್ಯ ವಿಷಯಗಳಾಗಿರುತ್ತವೆ.

ಇಲ್ಲಿಯ 'ಹೊಸ ಬೆಳಕು' 'ಮತಾಂತರ' 'ನಡುವಿನ ಪರದೆ' ಈ ಕಥೆಗಳಿಗೆ ಹೆಣ್ಣು-ಗಂಡಿನ ಸಮಸ್ಯೆ ವಸ್ತುಗಳನ್ನು ಒದಗಿಸಿಕೊಟ್ಟಿದ್ದರೆ, 'ಸಾಲ ಪರಿಹಾರ' 'ವಿಜ್ಞಾನದ ವಿಷ' 'ಕಾಲಮಹಿಮೆ' ಗಳಿಗೆ ಬಡತನ-ಸಿರಿತನದ ಸಮಸ್ಯೆ–ವಸ್ತುಗಳನ್ನು ಸಂಗ್ರಹಿಸಿ ಕೊಟ್ಟಿದೆ. 'ಕೆಳಗಿನ ನೆರಳು' 'ಹೊಗೆಯಿಂದ ಹೊರಗೆ' ಈ ಕತೆಗಳು ಅಧಿಕಾರ–ಅನಧಿಕಾರಗಳ ಹೋರಾಟದಿಂದ ಪ್ರಚೋದಿತವಾದವುಗಳು. 'ವೈರಾಗ್ಯ-ವೈಯ್ಯಾರ' ಎಂಬ ಕತೆಯು ಮನೋವಿಶ್ಲೇಷಣೆಯ ರಾಜ್ಯಕ್ಕೆ ಸೇರಿಸುದು.

ಎಲ್ಲ ಕತೆಗಳಲ್ಲಿಯೂ ಶ್ರೀ. ಜೋಶಿಯವರು ಘಟನಾ ಚಮತ್ಕೃತಿಗಳಿಗೆ ವಿಶೇಷ ಲಕ್ಷ್ಯ ಕೊಟ್ಟಿದ್ದಾರೆ. 'ಹೊಸ ಬೆಳಕು' 'ನಡುವಿನ ಪರದೆ' ಈ ಕತೆಗಳಲ್ಲಿಯ ಸೌಂದರ್ಯವನ್ನು ನಾನು ಸಂಪೂರ್ಣವಾಗಿ ಮೆಚ್ಚಿದ್ದೇನೆ 'ಕೆಳಗಿನ ನೆರಳು' 'ಸಾಲ ಪರಿಹಾರ, 'ವಿಜ್ಞಾನದ ವಿಷ' ಕತೆಗಳ ಪ್ರಚಾರ ಚಾತುರ್ಯವನ್ನು ಮನವಾರೆ ಒಪ್ಪಿಕೊಂಡಿದ್ದೇನೆ.

ಶ್ರೀಮಾನ್ ಜೋಶಿಯವರ ಜೀವನದ ಅಭ್ಯಾಸ ಅನುಭವಗಳು ಇನ್ನೂ ಹೆಚ್ಚಾಗಲಿ; ಅವರ ಕತೆಗಳಿಂದ ಕನ್ನಡ ಸಾಹಿತ್ಯದೇವಿಯ ಶೃಂಗಾರದ ಸಂವರ್ಧನೆಯಾಗಲಿ.

ಜಯಂತಿ ಕಾರ್ಯಾಲಯ,<br>ಧಾರವಾಡ,<br>ತಾ॥ ೧೬—೧೧—೧೯೩೨

**ಬೆಟಗೇರಿ ಕೃಷ್ಣಶರ್ಮ.**

# ಹೊಸ ಬೆಳಕಿನಲ್ಲಿ ಕಾಣುವ ಕತೆಗಳು.

---




ಪ್ರಕಾಶಕರು ಮತ್ತು ಮುದ್ರಕರು:

**ಭಾಲಚಂದ್ರ ವೆಂಕಟೇಶ ಘಾಣೇಕರ,**

ಪ್ರಕಾಶನ ಸ್ಥಳ: (ಭಗತಸಿಂಗ ಬೀದಿ) ಮುದ್ರಣ ಸ್ಥಳ:

**ಪ್ರತಿಭಾ ಗ್ರಂಥಮಾಲೆ,** ಧಾರವಾಡ. **ಪ್ರತಿಭಾ ಮುದ್ರಣ,**

ಧಾರವಾಡ. ಧಾರವಾಡ.

# ಹೊಸ ಬೆಳಕು.



ಗರ್ಲ್ಸ್ ಹಾಯ್‌ಸ್ಕೂಲಿನಲ್ಲಿ ಕ್ಲಾಸುಗಳು ನಡೆದಿದ್ದುವು. 'ಶಾಲೆ' ಎಂದಮೇಲೆ ಕೇಳುವುದೇನು ? ಅಲ್ಲಿ ಸಂತೆಯ ಗದ್ದಲ ಕೂಡುವುದು ಖಂಡಿತ. ಶಾಲೆಯ ಹುಡುಗರೆಂದರೆ ಶುದ್ಧ ಮಂಗಗಳು ! ಅದರಲ್ಲಿಯೂ ಹುಡುಗಿಯರ ಶಾಲೆ. 'Two watches two ladies never agree' ಎಂದು ಬಲ್ಲವರು ಹೇಳುತ್ತಾರೆ; ಅದು ಹದಿನಾರಾಣೆ ನಿಜ. ಎಳೆಯ ಹುಡುಗರ ಮನಸ್ಸಿಗೆ ಒಂದು ದಿಗ್ಬಂಧನವಿರುವುದಿಲ್ಲ. ಅದು ಕೇವಲ ಗಾಳಿ ಪಟ. ಮನಸ್ಸಿಗೆ ಬಂದಂತೆ ಹಾರಾಡುವುದು. ಅದಕ್ಕೆ ಮೇರೆ ಇಲ್ಲ, ಸೀಮೆ ಇಲ್ಲ. ಆದರೆ ಆ ಗಾಳಿಪಟಕ್ಕೆ ಸರಿಯಾದ ಸೂತ್ರವಿದ್ದರೆ.... !

ಲೀಲಾಬಾಯಿ ದೇಶಪಾಂಡೆಯವರು ಆ ಶಾಲೆಯ ಹುಡುಗಿಯರಿಗೆ ಭದ್ರವಾದ ಸೂತ್ರದಂತಿದ್ದರು. ಮ್ಯಾಟ್ರಿಕ್ ಕ್ಲಾಸಿಗೆ ಲೀಲಾಬಾಯಿಯವರು ಇಂಗ್ಲಿಶ್ ಕಲಿಸುತ್ತಿದ್ದರು. ಎಳ್ಳುಬಿದ್ದ ಸಪ್ಪಳವೂ ಸ್ಪಷ್ಟವಾಗಿ ಕೇಳಿಸುವಷ್ಟು ಶಾಂತತೆ ಅಲ್ಲಿ ನೆಲಸಿತ್ತು. ಕ್ಲಾಸಿನಲ್ಲಿಯ ಎಂಬತ್ತು ಹೆಣ್ಣುಕಣ್ಣುಗಳು, ಸಿಂಗದ ಕೈಗೆ ಬಿದ್ದ ಹರಿಣಾಂಗನೆಯ ನೆನಪು ಮಾಡಿಕೊಡುತ್ತಿದ್ದುವು. ಆ ಹುಡುಗಿಯರು ಉಳಿದಾವ ಮಾಸ್ತರರಿಗೂ ಅಂಜುತ್ತಿರಲಿಲ್ಲ—ಜಪಾನು ಜಗತ್ತನ್ನೇ ಗೆಲ್ಲುವ ಭಾಷೆಯಾಡುತ್ತಿತ್ತು; ಆದರೆ ಆಟಮಿನ ದರ್ಶನವಾದ ಕ್ಷಣ, ಬಿಳಿಯ ಧ್ವಜವೇರಿಸಿ ದಾಸ್ಯ ಒಪ್ಪಿಕೊಂಡು ಬಿಟ್ಟಿತಲ್ಲವೇ ? ಲೀಲಾಬಾಯಿಯವರು ಈ ವಿಷಯದಲ್ಲಿ 'ಆಟಮ್' ಗೆ ಪೂರ್ಣ ಸರಿಹೋಲುತ್ತಿದ್ದರು. ಹುಡುಗಿಯರು ಇತರ ಮಾಸ್ತರರ ಎದುರಿನಲ್ಲಿ ಗುಡುಗಾಡುತ್ತಿದ್ದವರು, 'ಲೀಲಾಬಾಯಿ ದೇಶಪಾಂಡೆ B. A. ( Hons. ) B. T. ( I Class )' ಎಂದಾಕ್ಷಣ ತಲೆ ಕೆಳಗೆ ಹಾಕುತ್ತಿದ್ದರು.

ಲೀಲಾಬಾಯಿಯವರು ಅಷ್ಟೊಂದು ಉಗ್ರವಾಗಿರಲಿಲ್ಲ. ಕ್ಲಾಸಿನ ಹುಡುಗಿಯರ ಮೇಲೆ ತಮ್ಮ ಸ್ವಾಮಿತ್ವ ಸ್ಥಾಪಿಸಿದ್ದು ಕೇವಲ ತಮ್ಮ ಗಾಂಭೀರ್ಯಪೂರ್ಣ ಮುಖಮುದ್ರೆಯಿಂದ; ಮಿತಭಾಷಣದಿಂದ, ತಮ್ಮ ತೇಜಸ್ಸಿನಿಂದ ತುಂಬಿದ ಸುಂದರ ಮುಖದಿಂದ. ನಿಜವಾಗಿಯೂ ಲೀಲಾಬಾಯಿಯವರ ಮುಖದಷ್ಟು ಸುಂದರ ಮುಖ, ಆ ಊರಮಟ್ಟಿಗಾದರೂ ನೋಡಲು ಸಿಕ್ಕಲಾರದು—ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಸಂಬುಗೆನ್ನೆ, ಮಾಟವಾದ ಹಣೆ, ಹಣೆಯ ಸುತ್ತು ಇಳಿಬಿದ್ದ ರೇಶಿಮೆಯಂತಿರುವ ಅವರ ಉಂಗುರುಗೂದಲು, ಪುಷ್ಟವಾಗಿ ಬೆಳೆದಿರುವ ಎದೆ, ಆ ಆಕರ್ಷಕವಾದ ಕಣ್ಣುಗಳು, ಪುಟಗೊಟ್ಟ ಚಿನ್ನದಂತಿರುವ ಮೈಬಣ್ಣ—ಇವೆಲ್ಲ ಅವರನ್ನು ಬೇಲೂರಿನ ಶಿಲಾಬಾಲಿಕೆಗೆ ಹೋಲಿಸಹಚ್ಚುತ್ತಿದ್ದುವು. ಲೀಲಾಬಾಯಿಯವರ ವಯಸ್ಸು ಮೂವತ್ತನ್ನು ದಾಟಿದ್ದರೂ, ಅದೇ ಅರಳಿದ ಚೆನ್ನೈದಿಲೆಯಂತೆ ಕಂಗೊಳಿಸುತಿದ್ದಿತು ಅವರ ದೇಹಸೌಂದರ್ಯ. ಜಾರ್ಜೆಟ್ ಸೀರೆ ಉಟ್ಟು ಅವರು ಕ್ಲಾಸಿನಲ್ಲಿ ಬಂದರೆ, ಅವರ ಪ್ರತಿ ಅಂಗಾಂಗದ ಏರು ಇಳಿವು, ಸೌಂದರ್ಯ ಪೂರ್ಣವಾಗಿ ಕಂಗೊಳಿಸುತ್ತಿದ್ದುವು. ಇದೇ ಅವರ ವೈಶಿಷ್ಟ್ಯ, ನೋಡುವವರನ್ನು ಬೆರಗುಗೊಳಿಸುತ್ತಿತ್ತು. ಅವರು ಕೇವಲ ದೈಹಿಕ ಸೌಂದರ್ಯದಲ್ಲಿಯಷ್ಟೇ ಮೊದಲು ಕ್ರಮಾಂಕ ಪಡೆದಿರಲಿಲ್ಲ; ಬುದ್ಧಿವಂತ್ತೆಯೂ ಅದರ ಜತೆಯಲ್ಲಿ ಸೇರಿಕೊಂಡಿತ್ತು.

ಕ್ಲಾಸಿನಲ್ಲಿ ಬಂದವರೇ ಲೀಲಾಬಾಯಿ ಕಥೆಯೊಂದನ್ನು ಓದಿ ತೋರಿಸ ಹತ್ತಿದರು. ಪುಸ್ತಕದ ಹೆಸರು " Fairy tales from Turkey " ಕತೆಯ ಹೆಸರು ' God's Gift ' ( ದೇವರ ಕೊಡುಗೆ ) ಎಂದು. ಕತೆ ಸರಾಗವಾಗಿ ಓಡುತ್ತಿತ್ತು. ಆದರೆ ನಡುವೆ ಒಂದು ಶಬ್ದ ಬಂತು. ಒಂದರೆನಿಮಿಷ ಲೀಲಾಬಾಯಿಯವರು ಓದನ್ನು ನಿಲ್ಲಿಸಿದರು. ಸರಾಗವಾಗಿ ಸಾಗುವ ನದಿಗೆ ಆಣೆಕಟ್ಟು ಕಟ್ಟಿದಂತಾಯ್ತು. ಹೆಚ್ಚಾದ ನೀರು ಹೊರಚೆಲ್ಲಲೇ ಬೇಕಲ್ಲವೇ? ಆ ಶಬ್ದಗಳ ಮೇಲಿಂದ ಅಲುಗದ ಅವರ ಕಣ್ಣುಗಳಂಚಿನಲ್ಲಿ ನೀರಹನಿಗಳು ಕಾಣಿಸಿಕೊಂಡುವು. ಮುಂದೆ ಕುಳಿತ ಹುಡುಗಿಯರಿಗೆ ಅದು ಕಾಣಿಸದೆ ಹೋಗಲಿಲ್ಲ. ಹುಡುಗಿಯರು ಏನೋ ' ರಹಸ್ಯ ' ಎಂದು ಮನದಲ್ಲಿಯೆ ತಿಳಿದುಕೊಂಡರು. ಆದರೆ ಒಳಗಣ ಧ್ವನಿಗೆ ಹೊರಬರುವುದು ಸಾಧ್ಯವಿರ

ಲಿಲ್ಲ. ಲೀಲಾಬಾಯಿಯವರ ಗಾಂಭೀರ್ಯದ ಬೇಲಿಯೇ ಅಷ್ಟು ಭದ್ರ ವಾಗಿತ್ತು. ತಡೆಹಿಡಿದ ವಾಕ್ಯ ಅಷ್ಟೊಂದು ಗಹನವಾಗಿರಲಿಲ್ಲ.

ಒಬ್ಬ ಕುರುಬರ ಹುಡುಗ ನೀರು ಕುಡಿಯುವುದಕ್ಕಾಗಿ ಬಾವಿಯಲ್ಲಿ ಇಳಿಯುತ್ತಾನೆ. ಅಲ್ಲಿ ಒಬ್ಬ ಕುರೂಪಿಯಾದ ರಾಕ್ಷಸಿ ಕಾಣಿಸಿಕೊಳ್ಳುತ್ತಾಳೆ. ಅವಳ ಒಂದು ಕೈಯಲ್ಲಿ ಒಬ್ಬ ಸುಂದರ ಯುವಕ, ಇನ್ನೊಂದುಕೈಯಲ್ಲಿ ಒಬ್ಬ ಸುಂದರ ಯುವತಿ. ಆ ರಾಕ್ಷಸಿಗೆ ತಾನು ತುಂಬಾ ಸುಂದರಿ ಎನ್ನುವ ಹೆಮ್ಮೆ ಇರುತ್ತದೆ; ಅಲ್ಲಿ ನೀರು ಕುಡಿಯುವುದಕ್ಕೆ ಬಂದವರನ್ನೆಲ್ಲ, 'ಯಾರು ಸುಂದ ರರು ?' ಎಂದು ಕೇಳುತ್ತಿರುತ್ತಾಳೆ. ಎಲ್ಲರೂ ಸತ್ಯ ಹೇಳುತ್ತಾರೆ, ಆ ರಾಕ್ಷ ಸಿಯ ಕೋಪಕ್ಕೆ ಬಲಿ ಬೀಳುತ್ತಾರೆ. ಈಗ ಕುರುಬರ ಹುಡುಗನಿಗೂ ಅದೇ ಪ್ರಶ್ನೆ ಕೇಳುತ್ತಾಳೆ ಆ ರಾಕ್ಷಸಿ: "Which of us is the more beautiful, this youth, this girl or, I," ( ನಮ್ಮಲ್ಲಿ ಯಾರು ಸುಂದರರು ? ಈ ಯುವಕನೋ ? ಈ ಯುವತಿಯೋ ಅಥವಾ ನಾನೋ ? )

ಕುರುಬರ ಹುಡುಗ ಪೇಚಿನಲ್ಲಿ ಬೀಳುತ್ತಾನೆ. ಸತ್ಯ ಹೇಳಿದರೆ ಸಾಯು ತ್ತಾನೆ; ಸುಳ್ಳಾಡಿದರೆ, ಮರಣಕ್ಕಂಜಿ ಸುಳ್ಳಾಡಿದ ಪಾಪ ಬರುತ್ತದೆ. ಆದರೂ ಹುಡುಗ ವಿಚಾರವಂತ, ವಿಚಾರಿಸಿ ಉತ್ತರ ಹೇಳಿಯೂ ಬಿಡುತ್ತಾನೆ:

"Whomsoever the heart loves is beautiful." ( ಒಳ ಹೃದಯದಿಂದ ಪ್ರೀತಿಸಲ್ಪಟ್ಟ ವಸ್ತು ಸುಂದರವಾಗಿರುತ್ತದೆ. )

ಅವನು ಕೊಟ್ಟ ಉತ್ತರ ಸುಂದರವಾಗಿತ್ತು. ಆದರೆ ಆ ವಾಕ್ಯ ಲೀಲಾ ಬಾಯಿಯವರನ್ನು ಯೋಚನೆಗೆ ಈಡು ಮಾಡಿತ್ತು. ಅದೊಂದೇ ವಾಕ್ಯ ಅವರನ್ನು ತಡೆಹಿಡಿದು ನಿಲ್ಲಿಸಿತ್ತು. ಆ ಸ್ತಬ್ಧತೆ, ಅವರ ಗಾಂಭೀರ್ಯದ ಶಿಥಿಲತೆಗೆ ಎಡೆಮಾಡಿಕೊಟ್ಟಿತು. ಆ ಶಿಥಿಲತೆಯ ಉಪಯೋಗ ಪಡೆದು ಕೊಂಡು, ಮೂಲೆಯಲ್ಲಿ ಕುಳಿತ ಕಿಡಿಗೇಡಿ ಮೇರಿ ಡಿಸೋಝಾ ಎದ್ದುನಿಂತು ಪ್ರಶ್ನೆಯನ್ನು ಕೇಳಿದಳು:

"ಮ್ಯಾಡಮ್, ಒಂದು ಪ್ರಶ್ನೆ."

"ಕೇಳು" ಪುಸ್ತಕದತ್ತ ಇದ್ದ ಮುಖವನ್ನು ಮೇಲಕ್ಕೆತ್ತದೆ ಲೀಲಾ ಬಾಯಿ ಉತ್ತರಿಸಿದಳು.

“ ಪ್ರೇಮವಿವಾಹದ ನಂತರ ಗಂಡನಿಗೆ ಏನೋ ಆಗಿ ಅವನು ಕುರೂಪಿ ಯಾಗುತ್ತಾನೆ, ಆದರೆ Whomsoever the heart loves is beautiful ಎಂಬ ವಾಕ್ಯದ ಪ್ರಕಾರ ಆಗಲೂ ಆ ಹೆಂಡತಿಗೆ ಆ ವಿಕೃತ ಗಂಡ ಸುಂದರ ನಾಗಿಯೇ ಕಾಣುತ್ತಾನೆಯೇ ? ”

ತಾರುಣ್ಯದ ಹೊಸ್ತಿಲಲ್ಲಿ ಆಗಲೇ ಕಾಲಿರಿಸಿದ ಕ್ಲಾಸಿನ ಹುಡುಗಿಯರಿಗೆ ಈ ತಮ್ಮ ಲೀಲಾಬಾಯಿಯವರ ಮೇಲಿನದೇ ಆದ ಪ್ರೇಮದೃಷ್ಟಾಂತ, ಅವ ರಲ್ಲಿ ತಡೆಹಿಡಿಯುವಷ್ಟು ನಗೆಯನ್ನು ಬರಿಸಿತು. ತತ್‍ಕ್ಷಣ ಕ್ಲಾಸಿನಲ್ಲಿ ಗೆರು ಸೊಪ್ಪೆಯ ಧಬಧಬೆಯ ಸಪ್ಪಳವಾಯಿತು ಅದು ಆ ಹುಡುಗಿಯರ ನಗು. ಲೀಲಾಬಾಯಿಯವರ ಮುಖ ಉಗ್ರವಾಯಿತು. ಗೌರವಾಗಿದ್ದ ಅವರ ಮುಖ ಮತ್ತಿಷ್ಟು ಬಣ್ಣಕಟ್ಟಿತು. ಕಿಡಿಕಿಡಿಯಾಗಿ ಒದರಿದರು: “Silence” (ಶಾಂತರಾಗಿರಿ).

—ಧಬಧಬೆಯ ಪ್ರವಾಹವನ್ನು ಮಣ್ಣಿನ ಒಡ್ಡಿನಿಂದ ತಡೆಯಬಹುದೇ? ಲೀಲಾಬಾಯಿಯವರಿಗೆ ತಮ್ಮ ಐದು ವರುಷಗಳ ಸರ್ವಿಸಿನಲ್ಲಿ ಇಂತಹ ಪರಿ ಸ್ಥಿತಿಯನ್ನು ಎದುರಿಸುವುದು ಇದೇ ಮೊದಲು. ಹೊಸತಾಗಿ ಬಂದ ಅನು ಭವ, ಮನುಷ್ಯನ ಹೃದಯವನ್ನು ಕಲಕಿಸಿ ಬಿಡುತ್ತದೆ ಕೈಯಲ್ಲಿರುವ ಪುಸ್ತಕವನ್ನು ಮುಚ್ಚಿ ಕ್ಲಾಸಿನಿಂದ ಹೊರಗೆ ನಡೆದು ಬಿಟ್ಟರು.

ಕ್ಲಾಸಿನಲ್ಲಿ ಮತ್ತೆ ಸ್ಮಶಾನಶಾಂತತೆ ವ್ಯಾಪಿಸಿತು. ನೀರನ್ನು ತಡೆ ಹಿಡಿದರೆ ಅದರ ಅಬ್ಬರ ಹೆಚ್ಚು. ನಡುವಿನ ಅಡ್ಡಗೋಡೆಯನ್ನೇ ಕೆಡವಿ ದಾಗ ? ಕ್ಲಾಸಿನಲ್ಲಿಯ ನಗು ಎಲ್ಲಿಯೋ ಮಾಯವಾಯಿತು; ಅವರೆಡೆಯಲ್ಲಿ ಯಾವುದೋ ಅಂಜಿಕೆ ವ್ಯಾಪಿಸಿತ್ತು. ಆದರೂ ಮೇರಿ ಡಿಸೋಝಾನ ಧೈರ್ಯಕ್ಕೆ ತಲೆದೂಗಿದರು. ಹೌದು. ಧೈರ್ಯವೇ ಸರಿ. ಲೀಲಾಬಾಯಿ ಯವರ ಸಂಸಾರದ ಮಾತನ್ನೇ ಉದಾಹರಣೆಯಾಗಿ ತೆಗೆದುಕೊಂಡು ಪ್ರಶ್ನೆ ಯನ್ನು ಕೇಳುವುದೆಂದರೆ ಸಾಮಾನ್ಯವೇ !

ಕ್ಲಾಸಿನಿಂದ ಹೊರಬಿದ್ದವರೇ ಲೀಲಾಬಾಯಿಯವರು, ನೇರವಾಗಿ ಟೀಚರ್ಸ್ ರೂಮಿನಲ್ಲಿ ಬಂದು ಕುಳಿತರು. ಅವರ ಮನಸ್ಸಿಗೆ ಶಾಂತಿ ಬೇಕಿತ್ತು. ಕ್ಲಾಸಿನಲ್ಲಿಯ ಘಟನೆ, ಅವರ ಮಾನಸಿಕ ಸರೋವರದ ಸ್ತಬ್ಧ ನೀರನ್ನು ಕಲಕಿಸಿತ್ತು. ಏನು ಮಾಡಿದರೂ ಮನಸ್ಸಿನ ಅಸ್ವಸ್ಥತೆ ಮಾಯ

ವಾಗಲಿಲ್ಲ ಹಾಗೆಯೇ ಎದ್ದು ತಣ್ಣೀರಿನಿಂದ ಮುಖ ತೊಳೆದುಕೊಂಡು, ತಲೆಗೂದಲನ್ನು ಸರಿಪಡಿಸುವುದಕ್ಕಾಗಿ ಕನ್ನಡಿಯ ಎದುರು ಬಂದು ನಿಂತರು. ತಮ್ಮ ಮುಖ ನೋಡಿ ತಾವೇ ದಿಗ್ಭ್ರಾಂತರಾದರು. ಅವರ ಮುಖದಿಂದ ಲಾವಣ್ಯ ಹೊರಸೂಸಿದಂತೆ ಕಾಣಿಸತೊಡಗಿತು. ಆದರೆ ಆ ಸುಂದರ ಪ್ರತಿಬಿಂಬವನ್ನು ಅವರಿಗೆ ನೋಡಲಾಗಲಿಲ್ಲ. ಅದು ತನ್ನ ಸದ್ಯಸ್ಥಿತಿಯನ್ನು ಅಣಕಿಸುವಂತೇ ತೋರಿತು. ಮನದ ಮೇಲೆ ಮಿದುಳಿನ ಸ್ವಾಮಿತ್ವ ತಪ್ಪಿತೇನೋ! ಇಲ್ಲವಾದರೆ ಅವರು ತಮ್ಮ ಪ್ರತಿಬಿಂಬಕ್ಕೆ ಅಣಕಿಸಿ ದೂರ ಸರಿಯುತ್ತಿರಲಿಲ್ಲ. ಪಾಪ, ನಿರ್ಜೀವ ಕನ್ನಡಿ! ಆದರೂ ಸೇಡು ತೀರಿಸಿಕೊಳ್ಳುವುದರಲ್ಲಿ ಕಡಿಮೆ ಇರಲಿಲ್ಲ. ಪುನಃ ಅಣಿಕಿಸಿಯೇ ಬಿಟ್ಟಿತು. ಲೀಲಾಬಾಯಿಯವರು ತಮ್ಮ ಸ್ಥಿತಿ ತೀರ ಅಸ್ವಸ್ಥವಾದಾಗ, ಆರಾಮ ಖುರ್ಚಿಯಲ್ಲಿ ಕುಳಿತು, ಮುಖದ ಮೇಲೆ ಅದೇ ಪುಸ್ತಕವನ್ನು ತೆರೆದು ಇಡಹೋದರು. ದುರ್ದೈವಕ್ಕೆ ಅದೇ ಪಾಠ ತೆರೆಯಬೇಕೇ, ಅದೇ ವಾಕ್ಯ ಕುಣಿಯಬೇಕೇ ?

"Whomsoever the heart loves is beautiful"

ಆದರೆ ಈ ಸಲ ಲೀಲಾಬಾಯಿಯವರಿಗೆ ಸಿಟ್ಟು ಬರಲಿಲ್ಲ. ತೆರೆದ ಪುಸ್ತಕದಿಂದ ಮುಖವನ್ನು ಮುಚ್ಚಿಕೊಂಡರು.

ನಿದ್ದೆ ಬಾರದಾಗ ಕಣ್ಣನ್ನು ಮುಚ್ಚಿ ಮಲಗಿದರೆ ?—ಥಿಯೇಟರಿನಲ್ಲಿ ದೀಪವಾರಿಸಿದಂತೆ—ಚಿತ್ರಪಟ ಸುರುವಾಗಿ ಬಿಡುತ್ತದೆ. ಲೀಲಾಬಾಯಿಯವರ ಸ್ಮೃತಿಪಟಲದ ಮೇಲೆ ಅವರ ಗತ ಜೀವನದ ಚಿತ್ರಪಟ ಸುಳಿಯತೊಡಗಿತು.

"—ಆ ಘಟನೆ—ಮಧುರ ರಸನಿಮಿಷ! ಹಾಯಸ್ಕೂಲಿನಲ್ಲಿ ತಾವು ಮ್ಯಾಟ್ರಿಕಿನಲ್ಲಿ ಕಲಿಯುವ ದಿನ. ತಮ್ಮ ಕ್ಲಾಸಿನ ದೇಶಪಾಂಡೇ ಮಾಸ್ತರರು—ತಾವು ಅವರ ಪವಿತ್ರ ಪ್ರೇಮಪಾಶದಲ್ಲಿ ಸಿಲುಕಿದ್ದು. ಆ ಘಟನೆ ಮದುವೆಯಲ್ಲಿ ಪರಿಣಮಿಸಿತು. ನೋಡಿದ ಜನರೆಲ್ಲ "ಲಕ್ಷ್ಮೀನಾರಾಯಣರ ಜೋಡಿ, ರಾಧಾ-ಕೃಷ್ಣರ ಜೋಡಿ" ಎಂದು ಬೆರಳು ಕಚ್ಚುತ್ತಿದ್ದರು. ತಾವು ಊರಲ್ಲಿ ಸಾಯಂಕಾಲ ತಿರುಗಾಡಿ ಮನೆಗೆ ಬಂದರೆ, ಮನೆಯಲ್ಲಿಯ ಕೆಲಸಗಿತ್ತಿ, ದೃಷ್ಟಿ ತೆಗೆದು ಬೆಂಕಿಯಲ್ಲಿ ಸಾಸಿವೆಕಾಳು ಒಗೆದರೆ, ಮನೆಯಲ್ಲಿ ಕಾಲಿಡಲಾಗದಷ್ಟು ಹೊಲಸು ವಾಸನೆ ಬರುತ್ತಿತ್ತು. ದೇಶಪಾಂಡೇ ಮಾಸ್ತರರು

ಆದರ್ಶವಾದಿಗಳು, ತುಂಬಾ ಬುದ್ಧಿವಂತರು, ಸುಂದರರು, ಅವರಿಗೆ ಸಮೊಪದ ಬಳಗದವರಾರೂ ಇರಲಿಲ್ಲ. ತನ್ನ ಸಹೃದಯಪೂರಿತ ಪ್ರೇಮ, ಅವರ ರುಕ್ಷ ಜೀವನದಲ್ಲಿ ಗಂಗೆಯ ಮಹಾಪೂರದಷ್ಟು ಸ್ವಾರಸ್ಯವನ್ನು ಹುಟ್ಟಿಸಿತ್ತು. ಅರೆನಿಮಿಷವಾದರೂ ಅವರು ತನ್ನನ್ನು ಬಿಟ್ಟು ಕದಲುತ್ತಿರಲಿಲ್ಲ. ತಾನಾದರೂ ಎಲ್ಲಿ? ಎರಡೂ ಕೈಗಳೂ ಕೂಡಿದಾಕ್ಷಣವೇ ಚಪ್ಪಾಳೆಯಲ್ಲವೇ? ತನ್ನ ಮನೆ—ಮನೆ ಅಲ್ಲ—ನಂದನ ವನ! ಆ ಸುಖ ಆ ಶಾಂತಿ—

—ಆದರೆ ಆ ಸುಖ ಶಾಂತಿ, ಬಿರುಗಾಳಿಯ ಪೂರ್ವದ ಚಿಹ್ನೆಯೆಂದು ಆಗ ತನಗೆಲ್ಲಿ ಅರಿವಿತ್ತು? ಹಗಲು ಹೋದಾಕ್ಷಣ ರಾತ್ರಿಯಾಗುವುದು ಸೃಷ್ಟಿಯ ನಿಯಮ ಸರಿ. ಆದರೆ, ಬಂದ ಆ ಕಾಳರಾತ್ರಿ ಮತ್ತೆ ಸರಿಯದೆ ನಿಂತರೆ? ತನ್ನ ಜೀವನದಲ್ಲಿ ಮತ್ತೆ ಹಗಲು ಯಾವಾಗ? ಹತ್ತು ವರ್ಷದ ಹಿಂದಿನ ಪ್ರಸಂಗ: ಮದುವೆಯಾಗಿ ಮೂರು ವರ್ಷವೂ ಆಗಿರಲಿಲ್ಲ. ಆ ಸುಡುಗಾಡು ಗೋಕಾಕ ಪ್ರವಾಸ........ ಮೋಟಾರಿನ ಅಪಘಾತ! ಒಂದು ಕಾಲು, ಒಂದು ಕೈ, ಮುಖಕ್ಕೆ ಗಾಯ! ತನ್ನ ಗಂಡನಿಗಾದ ಈ ದೈನ್ಯಾವಸ್ಥೆ—ಒಂದು ಸಲ ತನ್ನ ಮನದಲ್ಲಿ, ಆತ್ಮಹತ್ಯೆಯ ವಿಚಾರವೂ ಬಂದಿತ್ತು. ಅಪಾಯದಿಂದ ಗುಣವಾಗದಿದ್ದರೆ ಬಾಂವಿ ಬೀಳುವೆನೆಂದು ಶಪಥವನ್ನು ಮಾಡಿದ್ದೆ. ಆದರೆ ವಿಸ್ಮೃತಿ ಮಾನಸಿಕ ರೋಗಕ್ಕೊಂದು ರಾಮಬಾಣ ಔಷಧವೆಂದು, ಆನಂತರ ತಿಳಿಯಿತು. ಪ್ರೇಮದ ಉದ್ವೇಗ ಬರಬರುತ್ತ ಕಡಿಮೆಯಾಗತೊಡಗಿತು. ಗಂಡನ ಕುಂಟು ದೇಹ, ವಿಕೃತ ಮುಖ— ಛೀ, ಏನೋ ಒಂದು ತರದ ಜುಗುಪ್ಸೆ ಹುಟ್ಟಿಸಿತು. ಬರಬರುತ್ತ ಅವರ ವಿಷಯದಲ್ಲಿ ಅನಾದರ ಹೆಚ್ಚತೊಡಗಿತು ಮುಖ ನೋಡುವುದಕ್ಕೂ ಮನಸ್ಸಾಗಲಿಲ್ಲ—ಮೈ ಮುಟ್ಟುವುದಂತೂ ಬೇರೆ ಉಳಿಯಿತು. ಯಾವ ಸುಖಸಂಪತ್ತುಗಳಿದ್ದರೇನು?—ಆ ಹಸಿವು! ಹಸಿವನ್ನು ಹಿಂಗಿಸಿಕೊಳ್ಳಬಹುದಿತ್ತು; ಆದರೆ ಹುಲಿ ಹಸಿದರೆ—"

ಭವಿಷ್ಯದ ಭೀಕರ ಭೂತ ಅವಳ ಮುಂದೆ ಥೈ ಥೈ ಕುಣಿದಾಡತೊಡಗಿತು. ತಾಸು ಮುಗಿದ ಗಂಟೆಯ ಸಪ್ಪಳವೂ ಅವಳಿಗೆ ಕೇಳಿಸಲಿಲ್ಲ. ಟೀಚರ್ಸ್ ರೂಮಿನಲ್ಲಿ ಇತರ ಮಾಸ್ತರರು ಬಂದ ಸಪ್ಪಳವಾದಾಗಲೇ ಅವಳಿಗೆ ಎಚ್ಚರು ಬಂದಿತು. ಲೀಲಾಬಾಯಿ ಮುಖದ ಮೇಲಿನ ಪುಸ್ತಕವನ್ನು

ತೆಗೆದು ದೂರ ಸರಿಸಿದಳು. ಎದುರಿನಲ್ಲಿಯೇ ಮುಜುಮ್‌ದಾರ ಮಾಸ್ತರರು ನಿಂತಿದ್ದರು. ತಮ್ಮನ್ನು ನೋಡಿದಾಗ ಮಾತನಾಡಿಸದೇ ಇರುವುದು ಸಭ್ಯತನಕ್ಕೆ ಸಲ್ಲದ ವಿಷಯವೆಂದು, ಮುಜುಮ್‌ದಾರರು "ಏನು ಮನೆಯಲ್ಲಿ ನಿದ್ರೆ ಆಗಲಿಲ್ಲವೇ ?" ಎಂದು ತಮ್ಮ ಸರಲ–ಹಾಸ್ಯಯುಕ್ತ–ಶೈಲಿಯಲ್ಲಿ ಕುಶಲ ಪ್ರಶ್ನೆ ಮಾಡಿದರು.

ಲೀಲಾಬಾಯಿಯವರು ತಮ್ಮನ್ನು ಸಾವರಿಸಿಕೊಂಡು ಏಳಲಿಲ್ಲ; ಕುಳಿತಲ್ಲಿಯೇ ಕುಳಿತು "ಹೌದು" ಎಂದರು. ಮಾತು ಮುಗಿದೊಡನೆಯೆ ಮುಜುಮ್‌ದಾರರು ಬೇರೆಯ ಕಡೆಗೆ ಹೊರಳಿದರು. ಆದರೆ ಲೀಲಾಬಾಯಿಯವರ ದೃಷ್ಟಿ ಅವರ ಮೇಲಿಂದ ಕದಲಲಿಲ್ಲ. ಬಿಕ್ಕೆ ಬೇಡುವವನಿಗೆ ಪಕ್ವಾನ್ನದ ಎಲೆಯನ್ನು ಮುಂದೆ ಮಾಡಿದರೆ! ಹೌದು, ಒಂದು ವಿಷಯದಲ್ಲಿ ಲೀಲಾಬಾಯಿಯವರು ಬಿಕ್ಕೆಯವರೇ ಆಗಿದ್ದರು ಗಂಡನ ವಿಕೃತ ಮುಖ, ಕುಂಟು ದೇಹ ಅವರಲ್ಲಿ ಜುಗುಪ್ಸೆ ಹುಟ್ಟಿಸಿತ್ತು.

ಬೇಡದ ವಸ್ತುವನ್ನು ಆಹಾರದ ತಟ್ಟೆಯಲ್ಲಿ ಬಡಿಸಿದರೆ, ಕೆಲ ಹುಡುಗರು ಅವನ್ನು ಮುಟ್ಟುವುದಿಲ್ಲ. ಪಾಲಿಗೆ ಬಂದದ್ದೇ ಪಂಚಾಮೃತವೆನ್ನುವ ಸ್ವಭಾವ ಇವರದಲ್ಲ. ಕಾಜಿನ ಭರಣಿಯಲ್ಲಿ—ತೆಗೆಯಲು ಬಾರದ ಹಾಗೆ—ಭದ್ರವಾಗಿರಿಸಿದ ಹೋಳಿಗೆಯನ್ನು ಕಂಡಾದರೂ ಸಂತೋಷಪಟ್ಟಾರು; ಆದರೆ ಎಲೆಯಲ್ಲಿ ಬಡಿಸಿದ್ದನ್ನು ಕೈಯಿಂದ ಮುಟ್ಟರು. ಇಂಥವರ ಸಾಲಿಗೇ ಲೀಲಾಬಾಯಿಯವರೂ ಸೇರಿದ್ದರು—ಆದರೆ ತೀರ ಹಸಿವಾದಾಗ—ಉಪವಾಸದಿಂದ ಸಾಯುವ ಜನರೂ ಇದ್ದಾರೆ; ಅಥವಾ ಭರಣಿಯನ್ನು ಒಡೆದು ಹೋಳಿಗೆಗೆ ಕೈಹಾಕುವ ಸಾಹಸಿಗಳೂ—

ಹತ್ತು ನಿಮಿಷಗಳ ಸೂಟಿ ಮುಗಿಯಿತು. ಶಾಲೆಯ ಜವಾನ ಘಂಟೆ ಬಾರಿಸಿ ತನ್ನ ಕರ್ತವ್ಯವನ್ನು ನೆರವೇರಿಸಿದ. ಎಲ್ಲ ಮಾಸ್ತರರೂ ತಮ್ಮ ಕ್ಲಾಸಿಗೆ ಹೋದರು. ಆದರೆ ಲೀಲಾಬಾಯಿಯವರು ತಲೆ ನೋಯುತ್ತದೆಂದು ಹೇಳಿ, ಮನೆಯ ದಾರಿ ಹಿಡಿದರು. ನಡಿಗೆ ಮಾತ್ರ ಸಾವಧಾನವಾಗಿ ಸಾಗುತ್ತಿತ್ತು; ಶೀಘ್ರತೆ ಆ ನಡಿಗೆಯಲ್ಲಿ ಬರಲು ಸಾಧ್ಯವಿರಲಿಲ್ಲ. ಶೀಘ್ರತೆಗೆ ಆಮಂತ್ರಣ ಕೊಡಲು ಮನೆಯಲ್ಲಿ ಆಕರ್ಷಕತೆ ಇರಲಿಲ್ಲ. ಲೀಲಾಬಾಯಿಯವರ ದಾಂಪತ್ಯ ಜೀವನದಲ್ಲಿ ಒಂದು ಬದಿ ಕಮರಿ ಹೋದಂತೆ ಭಾಸವಾಗು

ತ್ತಿತ್ತು. ದಾರಿಯುದ್ದಕ್ಕೂ ನಡೆಯುತ್ತಿರುವಂತೆ ತಲೆತುಂಬ ಯೋಚನೆ
ಗಳೇ !

“ಗಂಡನ ಅಪಘಾತದ ನಂತರ ಅವರು ಕೂಡಿಸಿಟ್ಟ ನಿಧಿಯಿಂದ ಕಾಲೇಜು ಕಲಿತಳು. ಬಿ. ಎ. ಆಯಿತು; ಬಿ. ಟಿ. ಯೂ ಆಯಿತು. ಮನೆಯಲ್ಲಿ ಕೂಡಿಸಿದ ನಿಧಿಯೂ ತೀರಿತು. ಆದರೂ ಒಂದು ವೃತ್ತಿಗೆ ಮಾರ್ಗವಾಯಿತು. ಕೆಲಸವೂ ಸಿಕ್ಕಿತು. ಕೈತುಂಬ ಸಂಬಳವೂ ಸಿಗತೊಡಗಿತು. ಇದೆಲ್ಲ ಮಾಡಿದ್ದು ಯಾರು ? ಅವರು ! ಹೌದು ಮಾಡಿದರೇನಾಯಿತು? ಅವರು ತನಗೆ ಕಲಿಸಿದರೇನಾಯಿತು ? ತಾವು ಇನ್ನು ದುಡಿದು ತರುವುದು ಸಾಧ್ಯವಿಲ್ಲವೆಂದು ಮನದಟ್ಟಾದ ಮೇಲೆಯೇ ತನಗೆ ಕಲಿಸಿದ್ದಾರೆ. ಇದರಲ್ಲಿ ಯಾವ ಪಾರಮಾರ್ಥ? ಪಾರಮಾರ್ಥ ಇಲ್ಲವೇ ಇಲ್ಲ! ಸ್ವಾರ್ಥವೇ ತುಂಬಿದೆ ! ತಮ್ಮ ಹೊಟ್ಟೆಪಾಡಿಗಾಗಿ ಈ ಪಾರಮಾರ್ಥದ ಸೋಗನ್ನು ಧರಿಸಿದ್ದಾರೆ—ನಾನು ಈ ಸೋಗಿಗೆ ಮರುಳಾಗಿ, ಈ ಕುಂಟ ವ್ಯಕ್ತಿಯನ್ನು ಆಮರಣ ಸಾಕಲೇ ? ಅದರಿಂದ ತನಗಾವ ಸುಖ ? ಸುಖ ಒಂದೇ. ಅಂಗಹೀನ ಗಂಡನ ದರ್ಶನ—ಆ ವಿಕೃತ ಮುಖದ ದರ್ಶನ.”

ಲೀಲಾಬಾಯಿಯವರು ಇನ್ನೂ ವಿಚಾರಿಸುತ್ತಲೇ ಇದ್ದರು. ಆದರೆ ಬದಿಯಲ್ಲಿ ಕಾರು ಬಂದು ನಿಂತಿತು ಒಳಗಿನಿಂದಲೇ ಕಾರಿನ ಡ್ರಾಯವ್ಹರ್ ಕೂಗಿ ಹೇಳಿದ:

“ಬಾಯಿಯವರೇ, ಒಂದು ಬದಿಯಿಂದ ಹೋಗಿರಿ. ರಸ್ತೆಯ ನಡುವೇ ಹೊಂಟೀರಲ್ಲ ! ”

ಲೀಲಾಬಾಯಿಯವರಿಗೆ ಆಗಲೇ ಎಚ್ಚರುಬಂದದ್ದು. ಮುಖ ಮೇಲಕ್ಕೆತ್ತಿ ನೋಡಿದರು. ಕಾರಿನಲ್ಲಿ ಕುಳಿತು ಒಂದು ಜೊತೆ ವಾಯುವಿಹಾರಕ್ಕೆ ಹೊರಟಿತ್ತು. ಕೈಗೆ ಕೈ, ಮೈಗೆ ಮೈ ಅಂಟಿಸಿಕೊಂಡು ಕುಳಿತ ಆ ದೃಶ್ಯವನ್ನು ಲೀಲಾಬಾಯಿಯವರಿಂದ ನೋಡಲಾಗಲಿಲ್ಲ. ಅವರ ಹೊಟ್ಟೆಯಲ್ಲಿ ಕರಳು ಕಿತ್ತುಬಂದಂತಾಯಿತು. ಲೀಲಾಬಾಯಿ ದಾರಿಯ ಒಂದು ಬದಿಗೇನೋ ಸರಿದರು; ಆದರೆ ಮನಸ್ಸು ದಂಪತಿಗಳತ್ತಲೇ ಇತ್ತು. ಅವರ ಒಳಗಿನ ಹಸಿವು ಪ್ರಜ್ವಲಿತವಾಗತೊಡಗಿತು. ಆದರೆ ಊಟ ಉಣ್ಣುವವನ ತಟ್ಟೆಯತ್ತ ನೋಡಿದರೆ, ಹಸಿವು ಹಿಂಗಬಹುದೇ ?

ಲೀಲಾಬಾಯಿಯವರು ಮನೆಯ ಬಾಗಿಲಿಗೆ ಬಂದಾಕ್ಷಣ, ಮನೆಯ ಕೆಲಸಗಿತ್ತಿ ಸ್ವಾಗತಿಸಿದಳು. ಲೀಲಾಬಾಯಿಯವರು ನೇರವಾಗಿ ತಮ್ಮ ಕೋಣೆಗೆ ನಡೆದರು. ದೇಶಪಾಂಡೆ ಮಾಸ್ತರರು ಚಕ್ರದ ಕುರ್ಚಿಯಲ್ಲಿ ಕುಳಿತವರು, ತಮ್ಮ ಹೆಂಡತಿ ಬಂದದ್ದನ್ನು ತಿಳಿದು, ಒಂದೇ ಕೈಯಿಂದ ಕುರ್ಚಿಯ ಗಾಲಿಯನ್ನು ತಿರುಗಿಸಿಕೊಳ್ಳುತ್ತ, ಕೋಣೆಗೆ ಬಂದರು. ಕೆಲಸಗಿತ್ತಿ ಅವರಿಗೆ ಸಹಾಯಮಾಡಿ, ಅವರನ್ನು ಬಾಯಿಯವರ ಕೋಣೆಗೆ ಕಳಿಸಿ ತನ್ನ ಕೆಲಸಕ್ಕೆ—ಅಡುಗೆಯ ಮನೆಯ ಕಡೆಗೆ—ನಡೆದಳು. ಗಂಡ ತನ್ನ ಕೋಣೆಯಲ್ಲಿ ಬಂದದ್ದನ್ನು ನೋಡಿ ಲೀಲಾಬಾಯಿಗೆ ತುಂಬ ಆಶ್ಚರ್ಯವಾಯಿತು. ಗಂಡ ಹೆಂಡಿರ ಕೋಣೆಗಳು ಬೇರೆಯಾಗಿ ಬಹು ದಿನಗಳಾಗಿದ್ದುವು. ಈಗ ೭—೮ ದಿನಗಳಿಂದ ಲೀಲಾಬಾಯಿ ತನ್ನ ಗಂಡನ ಮುಖ ನೋಡುವುದನ್ನೂ ತಪ್ಪಿಸಿಕೊಂಡಿದ್ದಳು. ಹೆಂಡತಿಯ ಮನೋಗತವನ್ನು ಅನುಭವಗಳ ಮೇಲಿಂದ ಅರಿತ ದೇಶಪಾಂಡೇ ಮಾಸ್ತರರೂ, ಹೆಂಡತಿಯ ಮನಸ್ಸಿಗೆ ಬಾರದ ಕೆಲಸಕ್ಕೆ ಕೈಹಾಕುತ್ತಿರಲಿಲ್ಲ. ಪರಾವಲಂಬಿಗೆ ಹೊಟ್ಟೆ ತುಂಬಿದರಾಯಿತು; ಅದೇ ದೊಡ್ಡದು !

ದೇಶಪಾಂಡೆ ಮಾಸ್ತರರು ಒಳಗೆ ಬಂದ ಕೂಡಲೆ, ಒಂದು ಸಲ ಲೀಲಾಬಾಯಿ ಅವರೆಡೆಯಲ್ಲಿ ತೀಕ್ಷ್ಣದೃಷ್ಟಿ ಬೀರಿ ಗುಡುಗಿದರು:

"ಏನು ಬೇಕಾಗೇದ ನಿಮಗ ? ಒಳಗ ಕೆಲಸದಾಕಿ ಇದ್ದಾಳ ! ಏನಾದರೂ ಬೇಕಾದರೆ ಅಲ್ಲೇ ಇಸಕೊಳ್ಳಿರಿ !"

"ನನಗೇನೂ ಬೇಡ ! ಒಂದೇ ಒಂದು ಪ್ರಾರ್ಥನೆ ಕೇಳು !" ಒಂದು ಕೈಯಿಂದ ಕೋಣೆಯ ಬಾಗಿಲನ್ನು ಮುಚ್ಚುತ್ತಲೇ ದೀನಸ್ವರದಲ್ಲಿ ದೇಶಪಾಂಡೆಯವರು ಉತ್ತರಿಸಿದರು.

ದೇಶಪಾಂಡೆಯವರು ಬಾಗಿಲನ್ನು ಮುಚ್ಚುತ್ತಿದ್ದುದನ್ನೂ "ಒಂದು ಪ್ರಾರ್ಥನೆ" ಎಂದು ಕೇಳಿಕೊಳ್ಳುತ್ತಿರುವುದನ್ನೂ ನೋಡಿ, ಲೀಲಾಬಾಯಿಯವರ ಹೆಣ್ಣುಹೃದಯ ಅಂಜಿತು. ಆದರೆ ಅಂಗಹೀನತೆಯನ್ನು ನೋಡಿ ಧೈರ್ಯದಿಂದಲೇ ಪುನಃ ಕೇಳಿದರು:

"ಏನು ? ಬೇಗ ಹೇಳಿ ಮುಗಿಸಿರಿ ! ನನಗೆ ತುಂಬಾ ಕೆಲಸವಿದೆ.

೭ ಘಂಟೆಗೆ ರೇಡಿಯೋದಲ್ಲಿ ನನ್ನ ಲೆಕ್ಚರ್ ಇದೆ. ನನಗೆ ಹೋಗಲೇಬೇಕಾಗಿದೆ!"

"ಇನ್ನು ಮತ್ತೆ ತೊಂದರೆ ಕೊಡಬಯಸುವುದಿಲ್ಲ. ಶಾಂತವಾಗಿ ಕೇಳು!"

"ನೋಡು, ಒಬ್ಬರ ಮೇಲೆ ಭಾರವಾಗಿರೋದು ಚೆನ್ನಾದುದಲ್ಲ!"

"ಅದಕ್ಕೇನು ಮಾಡಬೇಕಂತೀರಿ?"

"ನಾನು ಸರಿಯಾಗಿದ್ದಾಗಿನ ದಿನಗಳನ್ನು ಜ್ಞಾಪಿಸಿಕೊಳ್ಳು!"

"ವಿಧವೆ ಆದವಳು ತನ್ನ ತುರುಬಿದ್ದಾಗಿನ ದಿನಗಳನ್ನು ಜ್ಞಾಪಿಸಿಕೊಂಡು ಇತ್ತರೇನು ಬರೋದು?"

"ನೀನು ಹೇಳುವುದು ನಿಜ; ಆದರೆ ನನ್ನ ಅಪಘಾತವಾದ ಮೇಲೆ ನಾನು ಆಸ್ಪತ್ರೆಯಲ್ಲಿದ್ದೆ. ನೀನು ನನಗಾಗಿ ೩-೩॥ ತಿಂಗಳು ಕಣ್ಣೀರನ್ನು ಕೋಡಿಯಾಗಿ ಹರಿಸಿದ್ದೆ. ಆ ಅಪಾಯದಿಂದ ನಾನು ಜೀವದಿಂದ ಉಳಿಯದಿದ್ದರೆ, ಭಾಂವಿಯಲ್ಲಿ ಬಿದ್ದು ಸಾಯುವೆನೆಂದು ಪಣ ತೊಟ್ಟಿದ್ದೆ."

"ನೀವನ್ನೋದೇನು? ನಾನು ಈಗ ಹೋಗಿ ಭಾಂವಿಯಲ್ಲಿ ಬೀಳಲ್ಯಾ?"

"ತ್ರಿಕಾಲಕ್ಕೂ ಆಗದು!"

"ಮತ್ತೇನು?"

"ಅಂದಿನ ಪ್ರತಿಜ್ಞೆ ಜ್ಞಾಪಿಸಿಕೋ. ಇಂದಿನ ನಿನ್ನ ನಡತೆಯನ್ನು ದಯವಿಟ್ಟು ವಿಮರ್ಶಿಸಿ ನೋಡು!"

"ಸೆರೆಯ ಮುಬ್ಬಿನಲ್ಲಿ ಮನುಷ್ಯ ಏನೇನೋ ಒದರಾಡುತ್ತಾನೆ. ಏರು ಜವ್ವನವೂ ಒಂದು ಮಾದಕ ಪೇಯ. ಪ್ರೇಮಭರದಲ್ಲಿಯ ಪ್ರತಿಜ್ಞೆ ಅದು. ಒಬ್ಬ ಮನುಷ್ಯ ಸತ್ತಾಗ, ಎದೆಎದೆ ಬಡೆದುಕೊಂಡು ಅಳುವ ಅವನ ಬಳಗವೇ ಅವನ ವರ್ಷಶ್ರಾದ್ಧದ ದಿನ ನಗುತ್ತ ಕೆಲೆಯುತ್ತ ಊಟ ಮಾಡುವುದನ್ನು ನಾವು ನೋಡುತ್ತಿಲ್ಲವೇ?"

"ನೀನು ಪ್ರತಿಜ್ಞೆ ಮಾಡಿದ್ದಕ್ಕೂ ನನ್ನ ಅಭ್ಯಂತರವಿಲ್ಲ. ಆದರಂತೆ ನಡೆಯಬೇಕೆನ್ನುವಷ್ಟು ಮೂರ್ಖನೂ ನಾನಲ್ಲ! - ನನಗಾವ ಬೇರೆ ಬಳಗವೂ

ಇಲ್ಲ. ನಿನ್ನನ್ನೇ ನಂಬಿದ್ದೇನೆ ! "

" ನಿಮ್ಮನ್ನು ನಡುನೀರಿನಲ್ಲಿ ಬಿಡಲಿಲ್ಲವಲ್ಲಾ. ಉಪವಾಸ ಕೆಡವಿದ್ದೇನೆಯೇ ? "

" ಹೊಟ್ಟೆ ಹೇಗೋ ತುಂಬುತ್ತದೆ; ಆದರೆ ಸ್ವಾರಸ್ಯವಿಲ್ಲ ! ಸಂಸಾರ ರಥದ ಒಂದು ಗಾಲಿ ಮುರಿಯಿತು. ಆ ಗಾಲಿಯನ್ನು ಬೈದೇನು ಪ್ರಯೋಜನ ? ಸರಿಯಾಗಿದ್ದಷ್ಟು ದಿನ ರಥ ಎಳೆಯಿತು; ನಡುವೆ ಮುರಿದದ್ದು ಅದರ ದೋಷವೇ ? "

" ಮುರಿದ ಗಾಲಿಯನ್ನು ಬೀಸಾಡಿ, ಬೇರೆ ಗಾಲಿ—— " ಅರ್ಧಕ್ಕೆ ಗಾಬರಿಯಾಗಿ ಲೀಲಾಬಾಯಿ ತಡೆಹಿಡಿದರು. ದೇಶಪಾಂಡೆಯುವರು " ಹೌದು ಹೊಸ ಗಾಲಿ ಹಾಕಬೇಕು; ಆದರೆ ಮೊದಲಿನ ಗಾಲಿಯನ್ನು ಬೀಸಾಟಿದ ನಂತರ. ನಾನು ನನ್ನ ಕರ್ತವ್ಯವನ್ನು ನೆರವೇರಿಸಿದೆ. ' ಗಂಡ ಕುಂಟನಾಗಿ ಹೆಂಡತಿಯನ್ನು ಬಿಕ್ಷೆಗೆ ಕಳಿಸಿದ ' ಎಂಬ ಲೋಕಾಪವಾದ ಬಾರದ ಹಾಗೆ, ನಾನು ನಿನಗೆ ಕಲಿಸಿದೆ, ಒಂದು ಮಾರ್ಗಕ್ಕೆ ಹಚ್ಚಿದೆ. ಈಗ ನನಗೆ ಓಡಾಡಲೂ ಆಗದು; ನೀನೇ ಬಾಂವಿಯ ವರೆಗೆ—— "

ಗದ್ಗದ ಕಂಠದಿಂದ ವಾಕ್ಯವನ್ನು ಅರ್ಧಕ್ಕೆ ಮುಗಿಸಿ, ದೇಶಪಾಂಡೆಯುವರು ಖೋಲಿಯಿಂದ ಹೊರಗೆ ನಡೆದರು. ಲೀಲಾಬಾಯಿಯುವರು ತಮ್ಮ ಕೋಣೆಯಲ್ಲಿ ಕದಲದೇ ನಿಂತರು. ಗಂಡನ ಕೊನೆಯ ವಾಕ್ಯ ಅವರನ್ನು ವಿಚಾರಕ್ಕೆ ಗುರಿ ಮಾಡಿತು. ವಿಚಾರಿಸತೊಡಗಿದರು:— " ಹೊಸ ಗಾಲಿ, ಹಳೆಯ ಗಾಲಿ—ಬಾಂವಿಗೆ—ಛೀ, ಮಾರ್ಗದಲ್ಲಿಯ ಮುಳ್ಳನ್ನು ತೆಗೆಯುವದಕ್ಕೆ ವೇಳೆ ಹತ್ತದು; ಆದರೆ ತಾನು ವಿಧವೆಯಾದ ಮೇಲೆ, ಬೇರೆ ಸದ್ಗೃಹಸ್ಥರು ನನ್ನನ್ನು ಮದುವೆಯಾಗಲು ಮುಂದೆ ಬರುವರೇ ? ಯಾರಾದರೂ ಬಂದರೆ, ಅವರೆಲ್ಲರೂ ಚಾರಿತ್ರ್ಯ ಶುದ್ಧವಿಲ್ಲದವರೆಂದು ನಿರ್ದಾಕ್ಷಿಣ್ಯವಾಗಿ ಹೇಳಬಹುದು—ಹೌದು ! ಎಸೆದ ಎಂಜಲೆಲೆಯನ್ನು ತಿನ್ನಲು ಸಾಕಿದ ನಾಯಿಗಳಲ್ಲಿ ಬರುತ್ತವೆ ? ಬೀಡಾಡೀ ನಾಯಿಗಳೇ— '

—ತಾನು ವಿಧವೆಯಾದರೆ, ತನ್ನ ಸೌಂದರ್ಯಕ್ಕೆ ಮರುಳಾಗಿ ಮುಜುಮ್‌ದಾರರು ತನ್ನನ್ನು—ಛೀ, ಅವರು ಈಗಾಗಲೇ ಸಪತ್ನೀಕರು !— ವಿಚಾರ ಮಾಡುತ್ತಿರುವಂತೆ ಲೀಲಾಬಾಯಿಯುವರ ಕಣ್ಣಮುಂದೆ ಮುಜುಮ್

ದಾರ್ ಮಾಸ್ತರರ ಚಿತ್ರ ಸುಳಿಯಿತು; ಸಾಕ್ಷಾತ್ ಮದನನ ಮೂರ್ತಿ! ಎತ್ತರದ ಸಿಲುವು, ಹರವಾದ ಎದೆ, ಮುಗುಳು ನಗೆಯ ಮುಖ, ನಿಷ್ಕಪಟ ಹೃದಯ. ಮುಜುಮದಾರರು ಆ ಶಾಲೆಗೆ ಬಂದು ಕೇವಲ ನಾಲ್ಕು ತಿಂಗಳಾಗಿದ್ದವು. ಅವರ ಮನೆತನದ ಸ್ಥಿತಿ ಲೀಲಾಬಾಯಿಯವರಿಗಷ್ಟೇ ಅಲ್ಲ; ಉಳಿದಾವ ಮಾಸ್ತರರಿಗೂ ತಿಳಿದಿರಲಿಲ್ಲ. ಆದರೆ ಅವರ ಪತ್ನಿ ಸುಶಿಕ್ಷಿತೆ ಎಂಬುದನ್ನು ಅವರ ಬಾಯಿಂದಲೇ ಕೇಳಿದ್ದರು. ಮುಜುಮ್‌ದಾರರ ಪತ್ನಿ M.B.B.S. ಕೋರ್ಸಿಗೆ ಹೋಗಿ ಮೂರು ವರುಷ ಕಲಿತು ಅರ್ಧಕ್ಕೆ ತಿರುಗಿ ಬಂದಿದ್ದರಂತೆ. 'ಹಾಗೇಕೆ?' ಎಂದು ಒಂದು ಸಲ ಲೀಲಾಬಾಯಿಯವರು ಕೇಳಿದ್ದರು. "ನಾನು ಲಗ್ನವಾದ ಮೇಲೆಯೇ ಅವಳನ್ನು ಡಾಕ್ಟರ್ ಕೋರ್ಸಿಗೆ ಕಳಿಸಿದ್ದೆ." ಎಂದು ಮುಜುಮ್‌ದಾರ್ ಮಾಸ್ತರರು ಉತ್ತರಿಸಿದ್ದರು. "ಹಾಗಾದರೆ ಪೂರ್ತಿಯಾಗಿ ಕಲಿಸಲಿಲ್ಲವೇಕೆ?" ಎಂದು ಮರುಪ್ರಶ್ನೆ ಕೇಳಿದ್ದರು.

"ತೊಟ್ಟಿಲು ಕಟ್ಟುವ ಸಮಯ— "

ಅರ್ಧಕ್ಕೆ ಮಾತು ನಿಲ್ಲಿಸಿ ಮುಜುಮ್‌ದಾರರು ಮನೆಯ ಕಡೆ ತೆರಳಿದ್ದರು.

ಶಾಲೆ ಬಿಟ್ಟಾಕ್ಷಣ ಮುಜುಮ್‌ದಾರರು ಉಳಿದೆಲ್ಲ ಮಾಸ್ತರರಂತೆ ಟೀಚರ್ಸ್ ರೂಮಿನಲ್ಲಿ ಹರಟೆ ಹೊಡೆಯುವುದಕ್ಕೆ ಕೂಡುತ್ತಿರಲಿಲ್ಲ. ಶಾಲೆ ಬಿಟ್ಟ ಗಂಟೆಯಾದಾಕ್ಷಣ, ಮನೆಯ ಕಡೆ ತೆರಳುತ್ತಿದ್ದರು "ಅಬ್ಬಾ, ಏನದು ಪತ್ನೀಪ್ರೇಮ?" ಎಂದು ಲೀಲಾಬಾಯಿಯವರಿಂದ ಹಿಡಿದು ಎಲ್ಲ ಮಾಸ್ತರರೂ ಅವರನ್ನು ಚೇಷ್ಟೆಮಾಡುತ್ತಿದ್ದರು. ಒಂದು ದಿನ ಲೀಲಾಬಾಯಿ ಧೈರ್ಯಮಾಡಿ ಅವರನ್ನು ಕೇಳಿಯೇ ಬಿಟ್ಟಿದ್ದರು:

"ನೀವು ಇಷ್ಟು ಪತ್ನಿಯ ಮೇಲೆ ಪ್ರೇಮ ಮಾಡುತ್ತೀರಲ್ಲಾ! ಅವಳು ಅಷ್ಟು ಸುಂದರಿಯಾಗಿದ್ದಾಳೆಯೇ?"

ಹೌದು, ನನ್ನ ದೃಷ್ಟಿಯಲ್ಲಂತೂ ಅವಳನ್ನು ಸರಿತೂಗುವವರು ಯಾರೂ ಇಲ್ಲ!"

ಮುಜುಮ್‌ದಾರರ ಉತ್ತರ ಕೇಳಿ ಲೀಲಾಬಾಯಿ ಒಳಗೊಳಗೇ ನಿರಾಶರಾಗಿ ಬಿಟ್ಟಿದ್ದರು. ಆದರೂ ಮುಜುಮ್‌ದಾರರ ಬಗೆಯ ಹುಚ್ಚು ಅವರ

ತಲೆಯಿಂದ ಮಾಯವಾಗಿರಲಿಲ್ಲ. ಈಗಂತೂ ಗಂಡನ ಮಾತಿನಿಂದ ಅದು ಮತ್ತಷ್ಟು ಕೆರಳತೊಡಗಿತು. ಮತ್ತೆ ವಿಚಾರಿಸತೊಡಗಿದರು:

—ತಾನು ವಿಧವೆಯಾದ ಮೇಲೂ ಮುಜುಮ್‌ದಾರರು ತನ್ನನ್ನು ವರಿಸುವುದು ಸಾಧ್ಯವಿಲ್ಲ— ಬೇರೆ ಮಾರ್ಗ— ತಾನಾಗಿಯೇ ಈ ದೇಹ ಅವರಿಗೆ— ಅಹುದು—! ಪಕ್ವಾನ್ನದ ತಾಟನ್ನು ಬಡಿಸಿದರೆ, ಬೇಡವೆನ್ನುವ ಜನರಿದ್ದಾರೆಯೇ ?—"

" ಇಲ್ಲ " ಎಂದು ಅವರ ಮನಸ್ಸೇ ಉತ್ತರಿಸಿತು.

ಅವರ ಮನಸ್ಸು ಕೂಡ ಲಂಚ ತಿಂದ ಗುಮಾಸ್ತನ ಹಾಗೆ ಆಗಿತ್ತು. ಮತ್ತೆ ಮತ್ತೆ ವಿಚಾರಮಾಡಿ ಕೊನೆಯ ನಿರ್ಧಾರಕ್ಕೆಯೆ ಬಂದರು.

ನೀಲಿ ಕಾಗದದ ಮೇಲೆ ನಕ್ಷೆ ತಯಾರಿಸಿದ ನಂತರ, ಮನೆ ಕಟ್ಟುವುದಕ್ಕೇನು ತಡ ? ಅದರಲ್ಲಿ ಏನಾದರೂ ಸಂಭವಿಸಿದರೆ, ಹೆಸರು ಹೇಳಲಿಕ್ಕಾದರೂ ಗಂಡನ ಇರುವು ಅವಶ್ಯವೆಂಬುದನ್ನು ನಿರ್ಧರಿಸುವುದಕ್ಕೂ ಅವರು ಮರೆಯಲಿಲ್ಲ

ಲೀಲಾಬಾಯಿ ಒಂದುಸಲ ಕೈಗಡಿಯಾರವನ್ನು ನೋಡಿಕೊಂಡರು. ಆರು ಹೊಡೆದಿತ್ತು. ಅಂದು ರೇಡಿಯೊದಲ್ಲಿ ತಮ್ಮ ಭಾಷಣವಿದ್ದುದನ್ನು ಜ್ಞಾಪಿಸಿಕೊಂಡು, ಮನೆಯಿಂದ ಹೊರಬಿದ್ದರು. ಅಂದೇ ತಮ್ಮ ಜತೆಯಲ್ಲಿ ರೆಡಿಯೋ ಸ್ಟೇಶನಿಗೆ ಬರಲು ಮುಜುಮ್‌ದಾರರನ್ನು ಕರೆದಿದ್ದರು. ಆದರೆ ಮುಜುಮ್‌ದಾರರ ಪತ್ನಿಯನ್ನು ಅಂದು ತವರ್ಮನೆಗೆ ಕಳಿಸುವುದಕ್ಕಾಗಿ ಸ್ಟೇಶನ್ನಿಗೆ— ಅದೇ ವೇಳೆಗೆ— ಹೋಗಬೇಕಾಗಿದ್ದುದರಿಂದ, ಕೊಂಚ ನೊಂದುಕೊಂಡಿದ್ದರು. ಅವರ ಜತೆಯಲ್ಲಿ ಬರೀ ಅಡ್ಡಾಡಿದುದರಿಂದಲೇ ಎಷ್ಟೋ ಶಾಂತಿ ಸಿಕ್ಕುತ್ತಿತ್ತು ಲೀಲಾಬಾಯಿಯವರಿಗೆ.

ರೇಡಿಯೋ ಕೇಂದ್ರ ತಲ್ಪಲು ಲೀಲಾಬಾಯಿಯವರಿಗೆ ತಡಹಿಡಿಯಲಿಲ್ಲ. ಅವರು ಅಲ್ಲಿಗೆ ಹೋದಾಗ ಆರುವರೆ ಹೊಡೆದಿತ್ತು. ಇನ್ನೂ ಅರ್ಧ ಗಂಟೆ ಕಾಲವಿದ್ದುದರಿಂದ, ಲೀಲಾಬಾಯಿ ಕೇಂದ್ರದ ( Retiring Room ) ವಿಶ್ರಾಂತಿಕೋಣೆಯಲ್ಲಿ ಹೋಗಿ ಕುಳಿತರು. ಅಲ್ಲಿ ಅವರ ಬದಿಯಲ್ಲಿಯೇ ಒಬ್ಬ ಕುರುಡಿಯೂ ಕುಳಿತಿದ್ದಳು. ಕುರುಡಿಯಾಗಿದ್ದಳಷ್ಟೇ ಅಲ್ಲ; ಮುಖವೂ ಸುಂದರವಾಗಿರಲಿಲ್ಲ. ಅಲ್ಲಲ್ಲಿ ಕಪ್ಪು ಕಲೆಗಳಿದ್ದುವು.

ಅವಳ ಬದಿಯಲ್ಲಿಯೇ ಹನ್ನೊಂದು ವರುಷದ ಹುಡುಗನಿದ್ದ. ಇಂಥ ವಳ ಬದಿಯಲ್ಲಿ ಕೂಡಲು ಲೀಲಾಬಾಯಿಯವರಿಗೆ ಕೊಂಚ ಕಡಿಮೆತನ ಎನಿಸಿತು. ಏನೋ ಒಂದು ವಿಧವಾದ ಜುಗುಪ್ಸೆಯುಂಟಾಯಿತು. ಅವರನ್ನು ಎಲ್ಲಕ್ಕೂ ಮಿಗಿಲಾಗಿ ಆಶ್ಚರ್ಯಗೊಳಿಸಿದ್ದು ಆ ಕುರುಡಿಯ ತುಂಬುಹೊಟ್ಟೆ.

"ಇಂತಹ ಅಸಡ್ಡಾಳ ದೇಹದ ಜತೆಯಲ್ಲಿ ರಮಮಾಣನಾದ ಆ ಪುರುಷನೆಷ್ಟು ಸುಂದರನಿರಬಹುದು ?" ಎಂದು ಮನದಲ್ಲಿಯೇ ವಿಚಾರಿಸಿ ನಕ್ಕರು. ಅವರಿಗೆ ಒಮ್ಮೆಲೇ ಬೀರಬಲ್ಲನ ಕಥೆಯು ನೆನಪಾಯಿತು. ಆ ಕತೆ "ಲೈಂಗಿಕ ತೃಪ್ತಿ" ಎಂದು ತಮಗೆ ಕೂಗಿ ಹೇಳಿದಂತೆ ಭಾಸವಾಯಿತು. ಲೀಲಾಬಾಯಿಯವರು ಅಂಜಿದರು. ತಾನೂ—ಆ ವಿಷಯದಲ್ಲಿ ತಾನೂ—ಛೇ, ಹುಲಿ ಹಸಿದರೆ—

ಆ ಹೆಂಗುಸು ಕುರುಡಿಯಾಗಿದ್ದರೂ, ತೊಟ್ಟ ಬಟ್ಟೆಗಳು ಮಧ್ಯಮ ವರ್ಗದವರಿಗೆ ಒಪ್ಪುವಂಥವುಗಳಾಗಿದ್ದುವು. ಆ ಬಟ್ಟೆಗಳಾದರೂ ಕಿಮ್ಮತ್ತು ಕೂಡಲೆಂದು ಲೀಲಾಬಾಯಿ ಆ ಕುರುಡಿಯನ್ನು ಮಾತನಾಡಿಸಿದರು:

"ಅಕ್ಕಾ, ನಿಮ್ಮ ಹೆಸರೇನು ?"

"ನನ್ನದೇ ? ಸುಲೋಚನೆ."

ಹೆಸರು ಕೇಳಿ ಲೀಲಾಬಾಯಿಯವರು ಅವಾಕ್ಕಾದರು. 'ಹೆಸರು ಭೀಮಸೇನ, ನೋಡುವುದಕ್ಕೆ ನರಪೇತಲು' ಎಂದಂತಾಯಿತಲ್ಲ ?—ಎಂದು ಉಕ್ಕಿ ಬರುವ ನಗುವನ್ನು ತಡೆದು ಮತ್ತೆ ಕೇಳಿದರು:

"ಇಲ್ಲಿಗೇಕೆ ಬಂದಿರಿ ?"

"ಹಾಡು ಹೇಳುವುದಕ್ಕೆ ಬಂದಿದ್ದೆ. ಈಗ ಟಾಂಗಾ ಬಂದಾಕ್ಷಣ ಹೋಗುತ್ತೇವೆ"

"ಸಂತೋಷ. ಕಣ್ಣು ಕೊಡದಿದ್ದರೂ ದೇವರು ಸಂಗೀತ ಕಲೆ ಕೊಟ್ಟಿದ್ದಾನೆ. ದೇವರು ದೊಡ್ಡವ ! ಹೊಟ್ಟೆಪಾಡಿಗೆ ಏನಾದರೂ ಕಲೆ ಕೊಟ್ಟಿದ್ದಾನೆ !"

ಕುರುಡಿ ಸಿಡುಕಿನ ಧ್ವನಿಯಲ್ಲಿ ನುಡಿದಳು:

"ನೀವು ಅನ್ಯಥಾ ಭಾವಿಸಿಕೊಳ್ಳಬೇಡಿ. ನಾನು ಹೊಟ್ಟೆಪಾಡಿಗೆ ಹಾಡಲು ಬಂದಿಲ್ಲ. ನನಗೆ ಕೈತುಂಬ ಸಂಬಳ ತರುವ ಗಂಡನಿದ್ದಾನೆ.

ನಾನು ಗರತಿ, ಹಾಡುವ ಬೀದಿಯ ಹೆಣ್ಣಲ್ಲ; ನಾನು ಹುಟ್ಟುಗುರುಡಿಯಲ್ಲ !" ಎಂದು ಉತ್ತರಿಸಿ, ಹುಡುಗನ ಆಧಾರದಿಂದ ಕೋಣೆಬಿಟ್ಟು ಹೊರಟು ನಡೆದಳು.

ಕುರುಡಿಯ ಉತ್ತರ ಕೇಳಿ ಲೀಲಾಬಾಯಿಯವರು ಒಂದುಸಲ ನಕ್ಕುಬಿಟ್ಟರು. 'ಕುರುಡಿಗೂ ಕೈತುಂಬ ಸಂಬಳ ತರುವ ಗಂಡನಿದ್ದಾನೆಯೇ ? ಹಾಗಾದರೆ ಅವನು ಇವಳಿಗಿಂತಲೂ ಹೆಚ್ಚು ಕುರೂಪಿಯಾಗಿರಲಿಕ್ಕೆ ಸಾಕು !' ಎಂದೆಂದುಕೊಂಡರು.

ರೇಡಿಯೋ ಕಾರ್ಯಕ್ರಮ ಮುಗಿಸಿ ಲೀಲಾಬಾಯಿಯವರು ಹೊರಗೆ ಬಂದರು. "ಇನ್ನೆಲ್ಲಿ ?" ಎಂದು ಅವರ ಮನಸ್ಸು ಕೇಳಿತು. 'ಖಂಡಿತವಾಗಿ ಈಗಲೇ ಮನೆಗೆ ಹೋಗುವುದು ಬೇಡ !" ಎಂದುಕೊಂಡರು ಕೂಡಲೇ ಮುಜುಮ್‌ದಾರರ ನೆನಪು ಬಂದಿತು ಸದಾಶಿವನಿಗೆ ಅದೇ—

ಒಂದು ಸಲ ಲೀಲಾಬಾಯಿಯವರ ಕಣ್ಣೆದುರಿನಲ್ಲಿ ಆ ಕುರುಡಿಯ ಚಿತ್ರ ಸುಳಿಯಿತು. ಅವಳ ಆ ತುಂಬು ಗರ್ಭಿಣಿಯ ಚಿನ್ಹೆ, ಆ ಚಿತ್ರ ಮರೆಯಾದಂತೆ ಅವರ ಸುಪ್ತಕಾಮ ಕೆರಳಿತು. ಕುರುಡಿಯೂ ಕೂಡ ತನ್ನ ಹಸಿವನ್ನು—

ಮುಜುಮ್‌ದಾರರ ಪತ್ನಿ, ಅಂದೇ ತವರುಮನೆಗೆ ಹೋಗುತ್ತಾರೆಂಬ ಮಾತು ಅವರಿಗೆ ಗೊತ್ತಿತ್ತು. ಅವರು ಹೇಳಿದ ಪ್ರಕಾರ, ಈ ಹೊತ್ತಿಗೆ ಮುಜುಮ್‌ದಾರರು ಮನೆಯಲ್ಲಿ ಏಕಾಕಿ, ತಮ್ಮ ಮನಸ್ಸಿನಲ್ಲಿಯ ನಿರ್ಧಾರವನ್ನು ಜ್ಞಾಪಿಸಿಕೊಂಡರು. ಆ ನಿರ್ಧಾರಕ್ಕೂ ಮುಜುಮ್‌ದಾರರ ಪತ್ನಿಯು ತವರುಮನೆಯ ಪ್ರಯಾಣಕ್ಕೂ ಸರಿಹೋದದ್ದನ್ನೂ ಜ್ಞಾಪಿಸಿಕೊಂಡು, ಸಂತೋಷಪಟ್ಟರು. 'ಕೆಲಸಗಳು ಪೂರ್ತಿಯಾಗುವಂತಿದ್ದರೆ ಈ ರೀತಿ ಶುಭಶಕುನಗಳು ಜರಗುತ್ತವೆ !' ಎಂದು ಸಂತಸಬಟ್ಟರು. ಲೀಲಾಬಾಯಿಯವರು ಈಗ ಮನೆಯ ಕಡೆ ಹೊರಟಿರಲಿಲ್ಲ. ಅವರ ಕಾಲುಗಳು ಮುಜುಮದಾರರ ಮನೆಯತ್ತ ಸಾಗಿದ್ದುವು. ನಡೆಯುತ್ತಿದ್ದಂತೆಯೇ ಒಂದು ಸಲ ಲೀಲಾಬಾಯಿಯವರು, ತಮ್ಮ ಪರ್ಸನ್ನು ತೆಗೆದು, ಒಳಗನ್ನಡಿಯಲ್ಲಿ ತಮ್ಮ ಮುಖ

ನೋಡಿಕೊಂಡರು. ತಮ್ಮ ಸೌಂದರ್ಯಕ್ಕೆ ತಾವೇ ಮರುಳಾದರು.

—ರಸಭರಿತ ತೊಂಡೆದುಟಿ, ಬಾಗಿದ ಹುಬ್ಬು, ನೀಲ ಕಣ್ಣು, ತುಂಬು ಗಲ್ಲ—

'ಇಂತಹ ಸೌಂದರ್ಯ ತಾನಾಗಿಯೇ ಬಂದರೆ, ನಿರಾಕರಿಸುವ ಮೂರ್ಖರೂ ಇದ್ದಾರೆಯೇ?' ಎಂದು ಒಂದು ಸಲ ತಮ್ಮನ್ನೇ ಕೇಳಿ ಕೊಂಡರು. ಈ ವಿಚಾರಗಳು ಮುಗಿಯುವ ಮೊದಲೇ ಅವರು, ಮುಜುಮ್‌ದಾರರ ಮನೆಯ ಮುಂಬಾಗಿಲಿಗೆ ಬಂದುಬಿಟ್ಟಿದ್ದರು.

ಮನೆ ಮಾಳಮರಡಿಯ ಕೊನೆಯ ಭಾಗದಲ್ಲಿ. ಮುಜುಮ್‌ದಾರರದೇ ಕೊನೆಯ ಮನೆ. ಆಗಲೇ ಕತ್ತಲೆ ಪಸರಿಸಿತ್ತು. ಮುಜುಮ್‌ದಾರರ ಮನೆಯ ಬಾಗಿಲು ಹಾಕಿತ್ತು. ಲೀಲಾಬಾಯಿಯವರೇನೋ ಬಾಗಿಲವರೆಗೆ ಬಂದರು, ಆದರೆ ಕೂಗಿ ಬಾಗಿಲು ತೆಗೆಸುವ ಧೈರ್ಯವಾಗಲಿಲ್ಲ. ಎದೆ ಬಡಿದು ಕೊಳ್ಳುತ್ತಿತ್ತು, ಬೆವರು ಬಿಡಹತ್ತಿತು.

ಕೂಗಿ ಬಾಗಿಲು ತೆಗೆಸುವ ಧೈರ್ಯವಾಗದ್ದರಿಂದ, ಅವರು ಬದಿಯ ಕಿಡಿಕಿಯ ಬಳಿ ಸಾರಿದರು. ಒಳಗೆ ದೀಪ ಉರಿಯುತ್ತಿತ್ತು. ಒಳಗಿನ ದೃಶ್ಯ ನೋಡಿ ಲೀಲಾಬಾಯಿಯವರ ಪಿತ್ತ ನೆತ್ತಿಗೇರಿತು.

—ಮುಜುಮ್‌ದಾರರು ಮಂಚದಮೇಲೆ ಒಂದು ಹೆಣ್ಣಿನ ತಲೆಹಿಡಿದ, ಅವಳಿಗೆ ಕಪ್ಪಿನಲ್ಲಿ ಏನೋ ಕುಡಿಸುತ್ತಿದ್ದರು. "ಹೆಂಡತಿಯನ್ನು ತವರ್ಮನೆಗೆ ಕಳಿಸಿ ಇತ್ತ ಈ ವ್ಯವಹಾರವೇ?" ಎಂದು ಲೀಲಾಬಾಯಿಯವರಿಗೆ ಮೊದಲು ಸಿಟ್ಟು ಬಂತು. ತದನಂತರ ಬಂದದ್ದು ಸವತಿ ಮಾತ್ಸರ್ಯದ ಸಿಟ್ಟು. ಆದರೆ ಮಾಡಬೇಕೇನೆಂಬುದು ತಿಳಿಯಲಿಲ್ಲ. ಅಲ್ಲಿಯೇ ನಿಂತರು. ಒಳಗೆ ಸಂಭಾಷಣೆಗೆ ಮೊದಲಾಯಿತು. ಲೀಲಾಬಾಯಿ ಜಾಗ್ರತೆಯಿಂದ ಲಾಲಿಸಹತ್ತಿದರು. "ನೀವೆಷ್ಟು ನನ್ನ ಸೇವೆ ಮಾಡುತ್ತಿದ್ದೀರಿ?"

"ಮತ್ತಾರು ಮಾಡಬೇಕು ಹೇಳು?"

"ಶಾಲೆಯಲ್ಲಿ ದಿನವೂ ದಣಿದು ಬರುತ್ತೀರಿ; ಮತ್ತೆ ಮನೆಯಲ್ಲಿ ನನ್ನ ಸೇವೆ! ಅಡಿಗೆಯವಳನ್ನಾದರೂ ಇಡಿರಿ ಎಂದರೆ ಅದಕ್ಕೂ ನೀವು ಒಪ್ಪೋದಿಲ್ಲ!"

" ಈ ಮನೆಯಲ್ಲಿ ನಮ್ಮಿಬ್ಬರ ನಡುವೆ ಮತ್ತೊಂದು ಹೆಣ್ಣು ಬೇಡ ನೋಡು ! "

" ಒಂದು ಮಾತು ಕೇಳಲೇ ? "

" ಏನು ? "

" ಕುರುಡು ಹೆಂಡತಿ ಎಂದು ನಿಮಗೆ ಎಂದಾದರೂ ನನ್ನಬಗ್ಗೆ ಜುಗುಪ್ಸೆ ಹುಟ್ಟುತ್ತದೆಯೇ ? "

ಲೀಲಾಬಾಯಿಯವರ ಹೃದಯದಲ್ಲಿ ಕಾದ ಕಬ್ಬಿಣ ರಸ ಸುರುವಿದಂತಾಯಿತು, ಕಿಟಕಿಯಲ್ಲಿ ಸ್ವಲ್ಪ ನಿರೀಕ್ಷಿಸಿ ನೋಡಿದರು. ಹೌದು ಅದೇ ಕುರುಡಿ! ರೇಡಿಯೋ ಸ್ಟೇಶನ್ನಿನಲ್ಲಿ ಭೆಟ್ಟಿಯಾದವಳು ! ಅದೇ ಕುರೂಪ ಮುಖದ ಹೆಣ್ಣು. ಆದರ ಅದೇನು ? ಆ ದೃಶ್ಯ ನೋಡಿಯುಂತೂ ಲೀಲಾಬಾಯಿ ಬೆರಗಾದರು.

ಮುಜುಮದಾರರು ಆ ಕುರುಡಿಯನ್ನು ಬರಸೆಳೆದು ಬಿಗಿದಪ್ಪಿ ಕೇಳಿದರು: " ನನ್ನ ಸುಲೂ, ಇಂದೇಕೆ ಹೀಗೆ ಪ್ರಶ್ನೆ ಮಾಡುತ್ತಿ ? "

" ನನ್ನ ಸ್ವಾಮಿ, ನನಗೆ ಹೆದರಿಕೆಯಾಯಿತು. ನನ್ನ ರೂಪ ನೋಡಿ ಜನ ನಿಂದಿಸುತ್ತಾರೆ. ಆದರ ಪರಿಣಾಮದಿಂದ— "

ಅವಳ ತಲೆಯ ಮೇಲೆ ಕೈಯಾಡಿಸುತ್ತ ಮುಜುಮ್‌ದಾರರು ನುಡಿದರು:

" ಹುಚ್ಚೀ, ಪ್ರೇಮ ರೂಪದ ಮೇಲೆ ಅವಲಂಬಿಸಿದೆಯೇ ? ನೀನು ಕಲಿತವಳು. Whomsoever the heart loves is beautiful. ಮೇಲಾಗಿ ನೀನೇನು ಹುಟ್ಟು ಕುರೂಪಿಯೇ ? ನೀನು ಡಾಕ್ಟರ್ ಆಗಿದ್ದರೆ, ಹೆಮ್ಮೆ ನನ್ನ ಪಾಲಿಗೆ ಬರುತ್ತಿತ್ತು. ಆದರೆ ಆ ಎಕ್ಸಪೆರಿಮೆಂಟಿನಲ್ಲಿ ಮುಖದ ಮೇಲೆ ಆಸಿಡ್ ಬಿದ್ದು ನೀನು ಕುರುಡಿಯಾದರೆ, ಅದು ನಿನ್ನ ತಪ್ಪೇ ? "

" ನಾನು ಧನ್ಯೆ ! ' ಏಳೇಳು ಜನ್ಮದಲ್ಲಿ ನೀವೇ ನನ್ನ ಪತಿದೇವರಾಗಿರಿ, ಎಂದು ಬೇಡಿಕೊಳ್ಳುತಿದ್ದೇನೆ; ಆದರೂ ಜನ ನಿಂದೆಗೆ. "

" ಹ್ಞಾಂ ನನಗೆ ಗೊತ್ತು ! ಆದಕ್ಕೇ ನಾನು ಮನೆಗಾರನ್ನೂ ಕರೆತರುವುದಿಲ್ಲ. ಇಂದೆಯೆ ನನ್ನ ಶಾಲೆಯಲ್ಲಿಯ ಒಬ್ಬ ಸಹೋದ್ಯೋಗಿನಿ, ತನ್ನ ಜತೆ

ಯಲ್ಲಿ ರೇಡಿಯೋ ಕೇಂದ್ರಕ್ಕೆ ಬರಹೇಳಿದ್ದಳು. ಆದರೆ ಸಿನ್ನ ಹಾಡೂ ಇದ್ದುದರಿಂದ, ಅವಳಿಗೆ 'ಹೆಂಡತಿಯನ್ನು ತವರ್ಮನೆಗೆ ಕಳಿಸುವುದಿದೆ' ಎಂದು ಸುಳ್ಳಾಡಿ ತಪ್ಪಿಸಿಕೊಂಡೆ. ಸವಃಜವ ನಿಂದೆ ನನಗೆ ಬೇಡವಾಗಿತ್ತು. ಕೇವಲ ನೀನೇ ನನ್ನ ಪ್ರಾಣ" ಎಂದು ಮತ್ತೆ ಬಿಗಿದಪ್ಪಿದರು.

ಹೊರಗೆ ನಿಂತು ನೋಡುತ್ತಿದ್ದ ಲೀಲಾಬಾಯಿಯವರ ಗಲ್ಲಗಳು ಒದ್ದೆಯಾಗಿದ್ದುವು. ಕೈಯಲ್ಲಿಯ ಕರವಸ್ತ್ರವೂ ಒದ್ದೆಯಾಗಿತ್ತು. ಕಣ್ಣಲ್ಲಿ ನೀರು ಹರಿಯುತ್ತಲೇ ಇತ್ತು. ಹೊಸ ನೀರು ಹಳೆಯ ನೀರನ್ನು ಕೊಚ್ಚಿಕೊಂಡು ಹೋಗುತ್ತಿತ್ತು. ಅಲ್ಲಿಂದ ಸರಿದು ರೋಡಿಗೆ ಬಂದರು. ಚೌಕಿಗೆ ಬಂದಾಗ ಮನೆತನಕ ನಡೆದುಕೊಂಡು ಹೋಗುವಷ್ಟು ಅವರಲ್ಲಿ ತಾಳ್ಮೆ ಉಳಿದಿರಲಿಲ್ಲ. ಟಾಂಗಾ ಗೊತ್ತು ಮಾಡಿದರು.

ಲೀಲಾಬಾಯಿ ಮನೆಗೆ ಬಂದಾಗ, ಕೆಲಸಗಿತ್ತಿ ಬಾಗಿಲನ್ನು ಮುಂದೆ ಮಾಡಿ ತನ್ನ ಮನೆಗೆ ಹೋಗಿದ್ದಳು. ಲೀಲಾಬಾಯಿ ನೇರವಾಗಿ ಗಂಡನ ಕೋಣೆಗೆ ಹೋದರು. ದೇಶಪಾಂಡೆಯವರು ಮಂಚದ ಮೇಲೆ ಮಲಗಿದ್ದರು. ಸಮೀಪದಲ್ಲಿಯೇ ದೀಪ ಉರಿಯುತ್ತಿತ್ತು. ಆ ಬೆಳಕಿನಲ್ಲಿ ಗಂಡನ ದೀನಮುದ್ರೆಯನ್ನೊಮ್ಮೆ ನೋಡಿದರು. ಒಳಗಿನ ಅಂತಃಕರಣ ಉಕ್ಕಿಬಂತು. ಹೋದವರೇ ಗಂಡನ ಪಾದದಡಿಯಲ್ಲಿ ಬಿದ್ದರು. ಅಳು ಜ್ವಾಲಾಮುಖಿಯಂತೆ ಸ್ಫೋಟವಾಯಿತು. ದೇಶಪಾಂಡೆಯವರು ಒಮ್ಮೆಲೆ ಎಚ್ಚತ್ತು ಎದ್ದು ಕುಳಿತರು. ತಮ್ಮ ಬದಿಯಲ್ಲಿ ಹೆಂಡತಿ ಕುಳಿತು ಅಳುತ್ತಿರುವುದನ್ನು ನೋಡಿದರು, ಆಶ್ಚರ್ಯವಾಯಿತು. ಲೀಲಾಬಾಯಿಯವರು ಬಿಕ್ಕುತ್ತ "ನನ್ನನ್ನು ಕ್ಷಮಿಸಿರಿ!" ಎಂದು ಉಸುರಿದರು.

ಒಂದು ಕೈಯಿಂದ ಅವಳ ತಲೆಗೂದಲನ್ನು ನೇವರಿಸುತ್ತಾ "ಕ್ಷಮೆಯಾಕೆ?" ಎಂದು ಕೇಳಿದರು. ಎಷ್ಟೋ ವರುಷಗಳ ನಂತರದ ಸ್ಪರ್ಶ, ಇಬ್ಬರಲ್ಲಿಯೂ ಹೊಸ ಸುಖದ ಕಲ್ಪನೆ ತಂದುಕೊಡುತ್ತಿತ್ತು. ಲೀಲಾಬಾಯಿ ಎದ್ದು ಕುಳಿತು ಮೆಲ್ಲಗೆ ಎಂದಳು:

“ ನನ್ನ ಜೀವನಕ್ಕೆ ಜ್ವರ ಬಂದಿತ್ತು ”

“ ಜ್ವರ ಬಂದಾಗ ಜನ ಔಷಧಿ ತೆಗೆದುಕೊಳ್ಳುತ್ತಾರೆ ! ”

“ ಹೌದು ನನಗೂ ಔಷಧಿ ಸಿಕ್ಕಿತು. ತುಂಬಾ ಕಹಿ ಇತ್ತು ಜ್ವರ ವಾಸಿಯಾಯಿತು ! ”

“ ಔಷಧಿ ಕಹಿಯಾಗಿಯೇ ಇರುವುದು ! ಮೇಲೆ ಸಕ್ಕರೆ ತಿನ್ನುತ್ತಾರೆ ! ”

“ ನನಗೆ ಸಕ್ಕರೆ ಬೇಡ ! ”

“ ಮತ್ತೇನು ? ”

“ ಬೆಲ್ಲ.... ”

ಉರಿಯುತ್ತಿದ್ದ ದೀಪವನ್ನು ಲೀಲಾಬಾಯಿ ಸಣ್ಣಗೆ ಮಾಡಿದರು. ಅಲ್ಲಿ ಪಸರಿಸಿದ ನಸುಗತ್ತಲೆ, ಅವರ ಸಂಸಾರಕ್ಕೆ ಹೊಸ ಬೆಳಕು ಕೊಟ್ಟಿತು.

---

# ಕೆಳಗಿನ ನೆರಳು.



" ಟಪ್....ಟಪ್....ಟಪ್.... "

ಟ್ರಾಯಿಪಿನ ಸಪ್ಪಳ ಅಲ್ಲಲ್ಲಿ ಕೇಳಬರುತ್ತಿತ್ತು. ಆದರೂ ಆಫೀಸಿನ ಉಳಿದೆಲ್ಲ ಕಾರಕೂನರು, ಒಂದೆಡೆಯಲ್ಲಿ ಕಲೆತು ಹರಟೆಯಾಡುತ್ತಿದ್ದರು. ಸಾಮಾನ್ಯವಾಗಿ ಆಫೀಸಿನಲ್ಲಿ ಹರಟೆಯೆಂದರೆ—ಸಿನಿಯಾರಿಟಿ ಗ್ರೇಡ, ಸಸ್ಪೆಂಡ, ವಾರ್ನಿಂಗ—ಇತ್ಯಾದಿಗಳು. ಆದರೆ ಇಂದಿನ ಹರಟೆ ತುಂಬಾ ವಿಚಿತ್ರ ರೀತಿಯದಾಗಿತ್ತು.

ವಿಷಯ ಕಡೂರ ಸುಬ್ಬಣ್ಣನದಾಗಿತ್ತು. ಅವನ ಜತೆಯಲ್ಲಿ ವಾಸಂತಿಯ ಹೆಸರೂ ಕೇಳಬರತೊಡಗಿತ್ತು.

" ಪಾಪ ಸುಬ್ಬನದೇನು ತಪ್ಪು. ಹೆಣ್ಣಿನ ಬಾಣಕ್ಕ ಬಲೀ ಬೀಳದ ಶುಕ ಮುನಿಗಳು ಈಗಿನ ದಿನ್ಸದಲ್ಲಿ ಸಿಕ್ತಾರೆಯೇ ? "

" ಸರಿಯಯ್ಯಾ ಸುಬ್ಬ ಅವಳ ಪಾಶದಲ್ಲಿ ಸಿಲುಕಿದ್ರೂ, ತಾನಿನ್ನೂ ಪವಿತ್ರನಾಗಿಯೇ ಇದ್ದೇನೆ, ಅಂತ ಹೇಳ್ತಾನಯ್ಯಾ "

" ಇದರಲ್ಲಿ ಸತ್ಯ ಇದ್ದರೂ ಇರಬಹುದು. "

" ಏನಯ್ಯ ನೀನು ಕಣೀ ಹೇಳೋರ ಹಾಗೇ ಹೇಳ್ತಾ ಇದೀಯ. "

" ನಾನು ಕಣೀ ಹೇಳುವವನಲ್ಲ, ನಾನು ಕವಿಯಾಗಿದ್ದೇನೆ. ರವಿ ಕಾಣದ್ದನ್ನೂ ರವಿ ಕಾಣುತ್ತಾನೆ ಎಂಬ ಮಾತು ನಿನಗೆ ಗೊತ್ತಿಲ್ಲವೇ ? "

" ಓಹೋ, ನೀನು ಕವಿ ಬೇರೆ ಆಗಿಬಿಟ್ಟಿದ್ದೀಯಾ ? ನೀನು ಯಾವಾಗಿನಿಂದ ಬರಿಯೋಕೆ ಪ್ರಾರಂಭಿಸಿದ್ದಿ ? "

" ಅಯ್ಯೋ ಇವನು ಬರೀತಾ ಇರೋದು ನಿಂಗೆ ಗೊತ್ತಿಲ್ಲವೇ ? ಬರದೂ ಬರದೂ ೩–೪ ಡಿಸ್ಪ್ಯಾಚ್ ಬುಕ್ ತೀರಿಸಿ ಬಿಟ್ಟಿದ್ದಾನಲ್ಲಪ್ಪಾ. "

ಈ ಮಾತಿನ ಜತೆಯಲ್ಲಿ ನಗುವಿನ ದೊಡ್ಡ ತೆರೆ ಅಲೆ ಅಲೆಯಾಗಿ ಆಫೀ

ಸಿನ ಗೋಡೆಗಳಿಗೆ ಅಪ್ಪಳಿಸಿ ಸ್ಫೋಟವಾಯಿತು. ನಗುವಿನ ರಭಸ ಕಡಿಮೆ ಯಾದಂತೆ ಮತ್ತೆ ಮಾತಿಗೆ ಪ್ರಾರಂಭವಾಯಿತು.

"ಪಾಪ, ವಾಸಂತಿಯುದಾದರೂ ತಪ್ಪೇನು? ಅವಳು 'Virgin Widow' ವಯಸ್ಸಿಗೆ ಬರೋ ಮೊದಲೇ ವಿಧವೆಯಾದವಳು. ಅವಳದೂ ಜೀವ. ಅವಳಿಗೂ ಆಶೆ ಆಕಾಂಕ್ಷೆ, ಇಚ್ಛೆಗಳಿರುವುದು ಸ್ವಾಭಾವಿಕ."

"ಓಹೋ, ಪ್ರಗತಿಶೀಲ ಸಾಹಿತಿಗಳೇ, ತಮ್ಮ ಅಭಿಪ್ರಾಯ ಹೊರಗೆ ಹೋಗಿ ವ್ಯಕ್ತ ಮಾಡಿ."

"ಪಟ್, ಪಟ್, ಪಟ್"— ಚಪ್ಪಲಿನ ಸಪ್ಪಳ ಅವರ ಹರಟೆಗೆ ತಡೆ ಮಾಡಿತು. ವಾಸಂತಿ ಮ್ಲಾನವದನಳಾಗಿ, ಆಫೀಸಿನಲ್ಲಿ ಬಂದು ನೇರಾಗಿ ಟಾಯಿಪ ಟೇಬಲ್ಲಿನ ಹತ್ತಿರ ಬಂದು ಕುಳಿತಳು. ಒಂದೆಡೆಯಲ್ಲಿ ಕಲೆತ ಕಾರ ಕೂನರು ತಮ್ಮ ತಮ್ಮ ಜಾಗೆಗೆ ತೆರಳಿದರು. ಅವರ ಪಿಸುಮಾತುಗಳು ವಾಸಂತಿಯ ಹೃದಯಕ್ಕೆ ಕಾದ ಕಬ್ಬಿಣದಿಂದ ಬರೆ ಕೊಡುತ್ತಿರುವಂತೆ ಭಾಸ ವಾಯಿತು. ತನ್ನ ವಿಷಯದ ಕಲ ಮಾತುಗಳು ಮಂದಿಯ ಬಾಯಲ್ಲಿ ಮೂಡಿದಂದಿನಿಂದ, ಅವಳು ಒಂದು ವಾರ ರಜೆ ಪಡೆದುಕೊಂಡು ಮನೆಯ ಲ್ಲಿಯೇ ಕುಳಿತುಕೊಂಡಿದ್ದಳು. ಜನತೆಯ ಎದುರು ತನ್ನ ಮುಖವನ್ನು ತೋರಿಸುವುದಕ್ಕೂ ಅವಳು ನಾಚಿದ್ದಳು, ಅಂಜಿದ್ದಳು. ಜಗತ್ತಿನಲ್ಲಿದ್ದ ಸನಾ ತನ ಶೃಂಖಲೆಯನ್ನು ಮುರಿದು ಮುಂದಡಿಯನ್ನು ಇಡುವೆನೆಂದು ದೃಢ ಸಂಕಲ್ಪವನ್ನು ಮಾಡಿಕೊಂಡ ವಾಸಂತಿ ಇಂದು ಪ್ರತಿಯೊಬ್ಬರಿಗೂ ಅಂಜುತ್ತಿ ದ್ದಳು. ತನ್ನ ಮುಖವನ್ನು ಮೇಲಕ್ಕೆತ್ತಿ ನಡೆಯಲೂ ಅವಳಿಗೆ ಧೈರ್ಯವಾ ಗುತ್ತಿರಲಿಲ್ಲ. ಆಫೀಸಿನಲ್ಲಿದ್ದ ೩೦ ಮಂದಿ ಕಾರಕೂನರ ದೃಷ್ಟಿ ತನ್ನೆಡೆಗೆಯೇ ಇದೆ ಎಂಬುದು, ತಾನು ಕೆಳಮುಖ ಹಾಕಿದ್ದರೂ, ಅವಳಿಗೆ ಚನ್ನಾಗಿ ಗೊತ್ತಿತ್ತು. ನಖಶಿಖಾಂತ ಬೆವೆತು ಹೋದ ವಾಸಂತಿಗೆ ಏನು ಮಾಡಬೇ ಕೆಂಬುದೇ ತಿಳಿಯದಾಯಿತು. ಸುಮ್ಮನೇ ಕೂಡುವದಕ್ಕಿಂತಲೂ ಏನಾದರೂ ಮಾಡಬೇಕೆಂದು ಟಾಯಿಪಿನ ರಾಡರನ್ನು ಅತ್ತಿಂದಿತ್ತ ತಿರುಗಿಸಿ, ಅದನ್ನು ಸರಿ ಪಡಿಸತೊಡಗಿದಳು. ಇಂಥ ಕೆಲಸದಲ್ಲಿ ನಿಮಗ್ನಳಾಗಿ ತನ್ನಷ್ಟಕ್ಕೆ ತಾನು ಯಾವದೋ ನಿರ್ಜನ ಪ್ರದೇಶದಲ್ಲಿದ್ದೇನೆ ಎಂಬ ಭಾವನೆಯನ್ನು ಕ್ಷಣಕಾಲ ವಾದರೂ ಮನಸ್ಸಿನಲ್ಲಿ ತಂದುಕೊಂಡಳು. ಅವಳಿಗೆ ಈ ಮೂವತ್ತು ಕಾರ

ಕೂನರ ಭೇದಕ ದೃಷ್ಟಿಯು ಅಷ್ಟೊಂದು ಮಹತ್ವವೆನಿಸಲಿಲ್ಲ. ಅದು ಕೇವಲ ಬರಲಿರುವ ದೊಡ್ಡ ಬಿರುಗಾಳಿಯ ಮೊದಲ ಸೆಳಕು.—ಬಿರುಗಾಳಿಯ ಭಯಾನಕ ಸ್ವರೂಪ—ಧರ್ಮ ಮಾರ್ತಂಡ ಗೋಪಾಲ ಸ್ವಾಮಿಯವರು: ಅಬ್ಬಾ, ಗೋಪಾಲಸ್ವಾಮಿಯವರ ಹೆಸರು ಕೇಳಿದಾಕ್ಷಣ, ವಾಸಂತಿಯು ಬೆವರಿನ ಸುರಿಮಳೆಯಲ್ಲಿ ತೊಯ್ದುಹೋದಳು. ಕೈಯಿಂದ ಟಾಯಿಪಿನ ರಾಡರ ತಿಕ್ಕುತ್ತಿದ್ದ ಹಾಗೆಯೇ ವಾಸಂತಿ ವಿಚಾರಿಸಹತ್ತಿದಳು.

"—ಗೋಪಾಲ ಸ್ವಾಮಿಯವರಿಗೆ— ಸರಕಾರ 'ಧರ್ಮಮಾರ್ತಂಡ' ಎಂಬ ಬಿರುದು ಕೊಟ್ಟಿದೆ. ಅವರ ದೃಷ್ಟಿಯಲ್ಲಿ ನಾನು ಮಾಡದ್ದು–ಮಾಡಿದ್ದು ಅಲ್ಲ; ಮಾಡಬೇಕೆನ್ನುವದು ಅಧರ್ಮದ ಕೆಲಸ. ಆದರೆ ನಾನು ಮಾಡುತ್ತಿರುವ್ರದು ಅನ್ಯಾಯವೇ? ಛೀ, ನನ್ನ ಮನೋದೇವತೆ ನನಗೆ ಧೈರ್ಯ ಕೊಡತ್ತಿದ್ದಾಳೆ. ಒಂದು ವೇಳೆ ಧೈರ್ಯದಿಂದ ಈ ಕೆಲಸವನ್ನು ಮಾಡಿಬಿಟ್ಟರೆ ಧರ್ಮಮಾರ್ತಂಡ ಗೋಪಾಲಸ್ವಾಮಿಯವರ ರುದ್ರದೃಷ್ಟಿಯಲ್ಲಿ ನಾವಿಬ್ಬರೂ ಸುಟ್ಟು ಭಸ್ಮವಾಗಬಹುದು. ನಾನು ಸುಟ್ಟರೂ ಅಡ್ಡಿ ಇಲ್ಲ. ನನ್ನ ಸುಬ್ಬಗೂ ಸುಖವಾಗಿರಬೇಕೆಂಬುದೇ ನನ್ನ ಆಶೆ—"

ವಾಸಂತಿ ಇನ್ನೂ ಏನೇನನ್ನೋ ವಿಚಾರಿಸುವದರಲ್ಲಿದ್ದಳು. ಆದರೆ ಕಾರಕೂನರಲ್ಲಿ ಮಾತಿನ ಗೋಜೆ ಒಮ್ಮೆಲೇ ಹೆಚ್ಚಾಯಿತು. ವಾಸಂತಿ ತಿರುಗಿ ನೋಡಿದಳು. ಆಫೀಸಿನ ತಲೆ ಬಾಗಿಲಿನಿಂದ ಸುಬ್ಬಣ ಒಳಗೆ ಬರತೊಡಗಿದ್ದ. ರಾಜದರ್ಬಾರಿನಲ್ಲಿ ಅರಸು ಬರಹತ್ತಿದನೆಂದರೆ ಭಟ್ಟಂಗಿ ಹೆಳವರ ಹೊಗಳಿಕೆನೆ ಪ್ರಾರಂಭವಾಗುತ್ತದೆ. ಹಾಗೆಯೇ ಕುಳಿತ ಕಾರಕೂನರು, ಸುಬ್ಬಣ್ಣನಿಗೆ ಒಂದೊಂದೇ ಶಬ್ದವನ್ನಾಡುತ್ತಿದ್ದರು. ಆದರೆ ಅದು ಹೊಗಳಿಕೆಯದಾಗಿರಲಿಲ್ಲ.

"ಓಹೋ ಸುಬ್ಬಣ್ಣನವರೇ, ಧನ್ಯವಾದಗಳು. ನೀವಿಬ್ಬರೂ ಸುಖವಾಗಿರಬೇಕೆಂಬುದೇ ನನ್ನ ಆಶೆ."

"ಸುಬ್ಬಣ್ಣ, ನಿನ್ನ ಧೈರ್ಯಕ್ಕೆ ನಾನು ಮೆಚ್ಚಿದೆ. ನಾವೆಲ್ಲರೂ ಪ್ರಗತಿಶೀಲರಾಗಬೇಕು."

"ಹೌದು. ವಿಧವೆ ಸುಂದರ ಸುರೂಪಿಯಾಗಿದ್ದರೆ ಮಾತ್ರ ನಾನೂ ಪ್ರಗತಿಶೀಲರ ಬಳಗಕ್ಕೆ ಸೇರಬಯಸುತ್ತೇನೆ."

"ಲೋ ಸುಬ್ಬ, ಈ ಕಣ್ಣುಮುಚ್ಚಾಲೆಯ ಆಟ ಬಿಟ್ಟು, ಬೆಳಕಿಗೆ ಬಾರೋ ಹೀಗೆ."

ಸುಬ್ಬಣ್ಣ ಯಾರಿಗೂ ಉತ್ತರ ಕೊಡಲಿಲ್ಲ. ಕೊಡುವ ಸ್ಥಿತಿಯಲ್ಲಿಯೂ ಇರಲಿಲ್ಲ. ನೇರಾಗಿ ತನ್ನ ಟೇಬಲ್ಲಿನತ್ತ ನಡೆದು ತನ್ನ ಖುರ್ಚಿಯಬಳಿ ಸಾರಿದ. ಒಂದು ಸಲ ಆಫೀಸಿನಲ್ಲಿಯ ಕಾರಕೂನರ ಮುಖಗಳನ್ನು ದೃಷ್ಟಿಸಿದ. ಆಗ ಅವನಿಗೆ ಕಂಡಿದ್ದು ಎಲ್ಲರ ಪ್ರಶ್ನಾರ್ಥಕ ಮುದ್ರೆ, ತಾನು ತಪ್ಪಿತಸ್ಥನಲ್ಲ ಎನ್ನುವದು ಸುಬ್ಬನಿಗೆ ಗೊತ್ತಿದ್ದರೂ, ಮಂದಿಯ ಬಾಯಿ ಅವನನ್ನು ತಪ್ಪಿತಸ್ಥನನ್ನಾಗಿ ನಿರ್ಣಯಿಸಿತ್ತು. ನಾಲ್ಕು ಜನ ಒಬ್ಬನನ್ನು ಹುಚ್ಚನೆಂದು ಕರೆದ. ಹಾಗೆ ಅವನನ್ನು ಕಾಣತೊಡಗಿದರೆ, ಅವನು ಎಷ್ಟೋ ಸರಿ ಇದ್ದರೂ, ಸ್ವಲ್ಪಾದರೂ ಹುಚ್ಚುಕಳೆ ಅವನ ಮುಖದ ಮೇಲೆ ಪಸರಿಸುತ್ತದೆ. ಇದೊಂದು ಸ್ವಾಭಾವಿಕ ಮಾನಸಿಕ ರೋಗ. ಸುಬ್ಬನೂ ಒಬ್ಬ ಸಾಮಾನ್ಯ ಮನುಷ್ಯ. ಇಂಥ ಮಾನಸಿಕ ರೋಗದಿಂದ ಮುಕ್ತನಾಗುವದು ಸುಲಭ ಸಾಧ್ಯವಿದ್ದ ಮಾತಲ್ಲ ತಾನು ಮಾಡುತ್ತಿರುವ ಕೆಲಸ ಯೋಗ್ಯವಲ್ಲವೆಂದು ಹೇಳಿ ಹೀಯಾಳಿಸುವ ಜನಕ್ಕೆ ಉತ್ತರ ಕೊಡಬೇಕೆಂದು ಒಂದುಸಲ ಸುಬ್ಬ ಯೋಚಿಸಿದ. ಆದರೆ ಬಾಯಿಯೇ ಏಳಲಿಲ್ಲ. ಹಾಗೆಯೇ ಖುರ್ಚಿಯಲ್ಲಿ ಕುಳಿತುಕೊಂಡ. ಈಗ ಮಾತನಾಡಿ ಫಲವೇನು, ಅದೂ ಸಂಬಂಧವಿಲ್ಲದವರ ಜತೆಯಲ್ಲಿ ಮಾತನಾಡಿ ಫಲವೇನು ? ತನ್ನ ನಡಾವಳಿಯ ಬಗ್ಗೆ ವಿಚಾರಿಸುವ ಧರ್ಮಮಾರ್ತಂಡ ಗೋಪಾಲಸ್ವಾಮಿಯವರಿಗೆ ಧೈರ್ಯವಾಗಿಯೇ ಹೇಳುವದನ್ನು ಹೇಳಿದರಾಯಿತು. ಎಂದು ವಿಚಾರಿಸಿ ಟೇಬಲ್ಲಿನ ಮೇಲಿದ್ದ ಕಾಗದ ರಾಶಿಗೆ ಕೈ ಹಾಕಿದ.

ಧರ್ಮ ಮಾರ್ತಂಡ ಗೋಪಾಲ ಸ್ವಾಮಿಯವರ ಬಗ್ಗೆ ಮನಸ್ಸಿನಲ್ಲಿ ವಿಚಾರಿಸುತ್ತಿರುವಾಗಲೇ, ಸುಬ್ಬ ಮೈತುಂಬ ಬೆವೆತು ಹೋದ, ಕೆಲಸದ ಕಡೆಯ ಲಕ್ಷವೆಲ್ಲಿಯೋ ಹೋಯಿತು. ಹಾಗೇ ಕೈಯಲ್ಲಿದ್ದ ಕಾಗದದ ಮೇಲೆ ಕಣ್ಣನಿಟ್ಟು ವಿಚಾರಿಸತೊಡಗಿದ.

—ತಾನೂ ಧರ್ಮ ಮಾರ್ತಂಡ ಗೋಪಾಲಸ್ವಾಮಿಯವರ ಊರಿನವನೇ. ತಾನೂ ಅವರ ಮಗಳೂ—ವನಜಾಕ್ಷಿ—ಕೂಡಿ ಲೋವ್ಹರ್ ಸೆಕಂಡರೀ ವರೆಗೂ ಕೂಡಿ ಕಲಿತವರು. ಅವರ ಮಗಳು—ವನಜಾಕ್ಷಿಯ ಜತೆಯಲ್ಲಿ,

ಎಷ್ಟೋ ಸಲ, ತಾನು ಚಿಕ್ಕವನಿರುವಾಗಲೇ ಗೋಪಾಲ ಸ್ವಾಮಿಯವರ ಮನೆಗೆ ಹೋಗಿ ಬರುತ್ತಿದ್ದ. ಆಗಿನಿಂದಲೇ ಗೋಪಾಲ ಸ್ವಾಮಿಯವರ ಕಠೋರ ಧಾರ್ಮಿಕತೆಯ ಅರಿವು ತನಗಾಗಿದೆ. ಊರಲ್ಲಿ ಯಾವದೇ ಧಾರ್ಮಿಕ ಕಾರ್ಯಗಳಾದರೆ, ಅವೆಲ್ಲವೂ ಧರ್ಮಮಾರ್ತಂಡ ಗೋಪಾಲಸ್ವಾಮಿಯವರ ನೇತ್ರತ್ವದಲ್ಲಿಯೇ ಜರುಗಬೇಕು. ಮೈಸೂರಿನ ಸಂಸ್ಕೃತಿ ಸಂರಕ್ಷಣ ಸಂಘಕ್ಕೆ ಗೋಪಾಲಸ್ವಾಮಿಯವರೇ ಮೊದಲಿನಿಂದಲೂ ಅಧ್ಯಕ್ಷರಾಗಿದ್ದರು. ಮುಂದೆ ಅವರು ತಮ್ಮ ಊರಿಂದ ಚನ್ನಪಟ್ಟಣಕ್ಕೆ ತಾಲ್ಲೂಕು ಆಫೀಸರರಾಗಿ ವರ್ಗಾಯಿಸಲ್ಪಟ್ಟರು. ಆಗಲೇ ಅವರ ಮಗಳು ವನಜಾಕ್ಷಿ ತಂದೆಯ ಜತೆಯಲ್ಲಿ ಚನ್ನಪಟ್ಟಣಕ್ಕೆ ತೆರಳಿದಳು ವನಜಾ ಸ್ವಭಾವತಃ ಮುದ್ದು ಹುಡುಗಿ, ಕಪಟವನ್ನರಿಯದ ಮುಗ್ಧೆ. ಸ್ವಭಾವ ಸ್ವಲ್ಪ ಹುಡುಗಾಟದ್ದಾದರೂ ಸಾಕ್ಷಾತ್ ದಯೆಯ ಮೂರ್ತಿಯಾಗಿದ್ದಳು. ಮುಂದೆ ತಾನು ತನ್ನ ಊರಲ್ಲಿಯೇ ಕಲಿತು ಮ್ಯಾಟ್ರಿಕ್ ಪರೀಕ್ಷೆಗೆ ಕಟ್ಟಿ ಪಾಸಾದೆನು. ನವಕರಿ ಸಿಗದ ದಿನದಲ್ಲಿ ಪಾಸಾದರೇನು, ಬಿಟ್ಟರೇನು. ತನಗೆ ತಂದೆತಾಯಿಗಳೂ ಇರಲಿಲ್ಲ ಪಿತ್ರಾರ್ಜಿತ ಆಸ್ತಿಯೂ ಇರಲಿಲ್ಲ. ತಾನು ವಾರದ ಮನೆಯ ಅನ್ನವನ್ನುಂಡೇ ಮ್ಯಾಟ್ರಿಕ್ ಪರೀಕ್ಷೆಯವರೆಗೆ ಕಲಿತಿದ್ದೆ. ಧರ್ಮಮಾರ್ತಂಡ ಗೋಪಾಲ ಸ್ವಾಮಿಯವರಲ್ಲಿಯೂ ಕೆಲದಿನ ಉಂಡು ಅವರಿಗೂ ಋಣಿಯಾಗಿದ್ದೆ. ಶಾಲೆ ಕಲಿಯುವದು ಮುಗಿದ ಮೇಲೆ ಅನ್ನ ಹಾಕುವವರಾರು? ಆಗ ತನಗೆ ಮತ್ತೆ ನೆನಪಾದದ್ದು ಚನ್ನಪಟ್ಟಣದ ತಾಲ್ಲೂಕು ಆಫೀಸರ ಧರ್ಮಮಾರ್ತಂಡ ಗೋಪಾಲಸ್ವಾಮಿಯವರು.—

ನವಕರಿಗಾಗಿ ಧರ್ಮಮಾರ್ತಂಡ ಗೋಪಾಲ ಸ್ವಾಮಿಯವರ ಕಡೆಗೆ ಬಂದೆ. ಆಗ—

" ಏನು ನೌಕರಿಗಾಗಿ ಬಂದೆಯಾ? ಯಾರು ನೀನು?" ವಾರದಲ್ಲಿ ಒಂದು ಸಲ ಅನ್ನವನ್ನಿಕ್ಕುತ್ತಿದ್ದರೂ ತನ್ನ ನೆನಪನ್ನೇ ಮರೆತು ಹೋದ ಗೋಪಾಲಸ್ವಾಮಿಯವರು ಗಂಭೀರವಾಗಿ ತನಗೆ ಪ್ರಶ್ನೆ ಮಾಡಿದ್ದರು. ಅದಕ್ಕೆ ತಾನು—

" ಹೌದು ಸ್ವಾಮಿ. ತಾವು ನನ್ನನ್ನು ಮರೆತಿರಬಹುದು ನಾನು ನಿಮ್ಮಲ್ಲಿ ವಾರದ ಊಟಮಾಡಿ, ವಿದ್ಯಾರ್ಜನೆ ಮಾಡಿದ ಬಡ ಹುಡುಗ ಸುಬ್ಬ."

" ಇದ್ದೀತು, ನನಗೆ ಜ್ಞಾಪಕವಿಲ್ಲ "

" ಸರಿಯಾಗಿದೆ. ಗಾಂಧಿ ನೆಹರೂರವರನ್ನು ಎಲ್ಲರೂ ಗುರುತಿಸುತ್ತಾರೆ. ಆದರೆ ಅವರು ಎಲ್ಲರನ್ನು ಗುರಿತಿಸುವದು ಸಾಧ್ಯವೇ? ಅದು ಅವರ ತಪ್ಪಲ್ಲ.'

" ಅದೆಲ್ಲ ಇರಲಿ, ನೀನ. ಮ್ಯಾಟ್ರಿಕ ಪರೀಕ್ಷೆಯಲ್ಲಿ ಪಾಸಾಗಿದ್ದೀಯಾ? ಚೆನ್ನಾದ ನಡತೆಯ ಬಗ್ಗೆ ಸರ್ಟಿಫಿಕೇಟ ತಂದೀದಿಯಾ ? "

" ನನ್ನನ್ನು ತಾವೇ ಬಲ್ಲಿರಿ ಎಂದು ಎಲ್ಲಿಯೂ ಒಳ್ಳೇ ನಡತೆಯ ಸರ್ಟಿಫಿಕೇಟು ದೊರಕಿಸುವ ಗೋಜಿಗೆ ಹೋಗಲಿಲ್ಲ ಮೇಲಾಗಿ ಕಾಗದದ ಮೇಲೆ ಯಾರಾದರೂ ಬರೆದು ಕೊಟ್ಟಷ್ಟಕ್ಕೇ ನಡತೆ ಸರಿಯಾಗಿರುತ್ತೆ ಎಂದು ನನ್ನ ನಂಬಿಕೆ ಇಲ್ಲ. "

" ಓಹೋ, ಇಷ್ಟುದ್ದದ ಮಾತೇ. ಇರಲಿ. ನಿನ್ನ ನಡತೆ ಸರಿಯಾಗಿರುವ ಬಗ್ಗೆ ಇಬ್ಬರು ಸದ್ಗೃಹಸ್ಥರ ಸರ್ಟಿಫಿಕೇಟುಗಳನ್ನು ಹಾಜರಪಡಿಸು. ಮುಂದೆ ವಿಚಾರಿಸುವಾ ? "

ಧರ್ಮ ಮಾರ್ತಂಡ ಗೋಪಾಲಸ್ವಾಮಿಯವರ ನಿಶ್ಚಯ ಸ್ವರದ ಉತ್ತರ ಕೇಳಿ ತಾನು ನಿರಾಶನಾಗಿ ಹೊರಳಿ ಜಡವಾದ ಹೆಜ್ಜೆಯನ್ನು ಹಾಕಿ ಹಿಂದೆ ಹೊರಳುವದರಲ್ಲಿದ್ದೆ. ಅಷ್ಟರಲ್ಲಿ ಸ್ವಾಮಿಯವರ ಮಗಳು ವನಜಾಕ್ಷಿ ಕಮಲದ ಹೂಗಳನ್ನು ಕೈಯಲ್ಲಿರಿಸಿಕೊಂಡು ಒಳಗಿನಿಂದ ಬಂದು—

" ಸುಬ್ಬಾ— ಏಯ್ ಸುಬ್ಬಾ ಯಾವಾಗ ಬಂದೆ. ಮ್ಯಾಟ್ರಿಕ್ ಪಾಸಾದೆ ಅಂತೆ, ನಾನೂ ಪಾಸಾದೆ."

"ವನಜಾ—" ಗೋಪಾಲಸ್ವಾಮಿಯವರು ಗುಡುಗಿದರು. ತಾಲ್ಲೂಕು ಆಫೀಸರನ ಮಗಳು ಒಬ್ಬ ಸಾಮಾನ್ಯ ಮನುಷ್ಯ— ಅದೂ ನವಕರಿ ಕೇಳಲು ಬಂದವನ ಜತೆಯಲ್ಲಿ ಮಾತನಾಡುತ್ತಿರವದು ಅವರಿಗೆ ಸರಿಬರಲಿಲ್ಲವೇನೋ?

ವನಜಾ ಒಂದು ಸಲ ತಂದೆಯ ಕಡೆ ಹೊರಳಿ ನೋಡಿ—

" ಅಪ್ಪಾ, ಸುಬ್ಬಾ ಇವನು—"

ಅವಳ ವಾಕ್ಯ ಪೂರ್ತಿ ಮುಗಿಯುವ ಮೊದಲೇ ಗೋಪಾಲಸ್ವಾಮಿಯು ಉತ್ತರಿಸಿದ್ದರು.

" ನನಗೆ ಅರ್ಥವಾಯ್ತು. ಸುಬ್ಬನೇ, ನೌಕರೀ ಕೇಳೋಕೆ ಬಂದೀದಾನೆ. "

ಹುಡುಗಾಟಿಕೆಯ ಸ್ವರದಲ್ಲಿ ತಂದೆಗೆ ವನಜಾ ಒತ್ತಾಯಪಡಿಸಿದಳು. "ಹಾಗಾದರೆ ನಿನ್ನ ಆಫೀಸಿನಲ್ಲಿ ಕೊಟ್ಬಿಬಿಡಪ್ಪಾ."

ಅವಳ ಮಾತು ಮುಗಿಯುವ ಮೊದಲೇ ದರಿದ್ರ ದಯಾಸಂಘದ ಜನ, ಧರ್ಮಮಾರ್ತಂಡರತ್ತ ಹಣ ಸಹಾಯ ಕೇಳಲು ತಮ್ಮ ಸಮಿತಿಯ ಹಣದ ಪೆಟ್ಟಿಗೆಯನ್ನು ಮುಂದೊಡ್ಡಿದರು.

ಪೆಟ್ಟಿಗೆಯತ್ತ ಲಕ್ಷ್ಯವಿಲ್ಲದವರಂತೆ ಧರ್ಮಮಾರ್ತಂಡ ಗೋಪಾಲಸ್ವಾಮಿಯವರು ಕೂಗಿದರು:

"ಸುಬ್ಬ, ಈಗ ನಿರುದ್ಯೋಗಿಯಾಗಿದ್ದೀಯೋ?"

"ಹೌದು, ನಿಜಕ್ಕೂ...." ತಾನು ಉತ್ತರಿಸಿದ್ದ.

"ಹಾಗಾದರೆ ನಾಳೆನಿಂದ ರೇಶನಿಂಗ ಆಫೀಸಿನಲ್ಲಿ ಕೆಲಸಕ್ಕೆ ಬಾ. ಹುಕುಮನ್ನು ನಾಳೆ ಕೊಡುವೆ. ಅಪಾಯಂಟಮೆಂಟ ನಾಳೆನಿಂದಲೇ ಮಾಡುವೆ."

ನಿರುತ್ಸಾಹದಲ್ಲಿ ಒಮ್ಮೆಲೆ ಆಶೆ-ಗೆರಸೊಪ್ಪೆಯ ಧಬಧಬೆಯಂತೆ ಹರಿದು ಬಂದಂತಾಯಿತು. ಒಮ್ಮೆಲೇ ಓಡಿಹೋಗಿ ಧರ್ಮಮಾರ್ತಂಡರ ಕಾಲುಗಳಿಗೆ ನಮಸ್ಕರಿಸಿ ತಾನು ಬಾಗಿಲ ಹೊರಗೆ ಬಿದ್ದ. ಹೊರಗೆ ಬೀಳುತ್ತಾಗಲೇ ಧರ್ಮ ಮಾರ್ತಂಡರ ಕೆಲ ಮಾತು ಕೇಳಿಸಿತ್ತು.

"ನೀವು ದರಿದ್ರ ದಯಾ ಸಂಘ ಅಂತಾ ಫಂಡ ಜಮಾ ಮಾಡುತ್ತೀರಿ. ಆದರೆ ನಾನು ದರಿದ್ರರಿಗೆ ನೌಕರೀ ಕೊಟ್ಟು ಉದ್ಧರಿಸುತ್ತೇನೆ. ಫಂಡು ಕೊಟ್ಟುದುದರಕಿಂತಲೂ ಹೆಚ್ಚು ಕೆಲಸ ನಾನೀಗ ಮಾಡುತ್ತಿದ್ದೇನೆ."

ಮುಂದೆ ನವಕರಿಯೂ ದೊರೆಯಿತು. ಧರ್ಮಮಾರ್ತಂಡರು ತಮ್ಮ ನವಕರರ ಜತೆಯಲ್ಲಿ ಹೆಚ್ಚು ಮಾತಾಡುತ್ತಲೂ ಇರಲಿಲ್ಲ. ವನಜಾ ಕಾಲೇಜ ಕಲಿಯಲು ಬೆಂಗಳೂರನ್ನು ಸೇರಿದಳೆಂದು ಜನರ ಬಾಯಿಂದ ತಿಳಿಯಿತು. ಏಕೆಂದರೆ, ಅವರ ಮನೆಗೆ ಹೋಗಲು ಯಾವ ಕಾರಕೂನನಿಗೂ ಧೈರ್ಯವಾಗುತ್ತಿರಲಿಲ್ಲ. ಧರ್ಮಮಾರ್ತಂಡ ಗೋಪಾಲಸ್ವಾಮಿಯವರ ಶಿಸ್ತೇ ಆ ರೀತಿಯದಾಗಿತ್ತು. ಆಫೀಸಿನಲ್ಲಿ ಕಂಡಕ್ಟ ಸರ್ಟಿಫಿಕೇಟ ಹಾಜರಪಡಿಸಲಿಲ್ಲದವನೆಂದರೆ ತಾನೊಬ್ಬನೇ. ಅದನ್ನು ಹಾಜರ ಪಡಿಸದಿದ್ದರೂ ತನ್ನಲ್ಲಿ ಯಾವ

ದುರ್ಗುಣಗಳೂ ಇರಲಿಲ್ಲ—ತನ್ನ ಆಫೀಸಿನಲ್ಲಿಯೇ ಕೆಲಸ ಮಾಡುತ್ತಿದ್ದ ಬಾಲವಿಧವೆ ವಾಸಂತಿ—"

"ಗರ್‌ರ್, ಗಕ್ಕ"

ಸುಬ್ಬ ಒಮ್ಮೆಲೇ ಸಾವರಿಸಿಕೊಂಡಿದ್ದನು. ಆಫೀಸಿನ ಹೊರ ಆವಾರದಲ್ಲಿ ಧರ್ಮಮಾರ್ತಂಡ ಗೋಪಾಲಸ್ವಾಮಿಯವರ ಕಾರು ಬಂದು ನಿಂತ ಸಪ್ಪಳವದು. ಆ ಕಾರಿನ ಸಪ್ಪಳದ ಜತೆಯಲ್ಲಿಯೇ, ಆಫೀಸಿನ ತುಂಬೆಲ್ಲ ರುದ್ರಗಂಭೀರ ಪರಿಸ್ಥಿತಿ ನೆಲಸಿತು. ಟಾಯಿಪಿಸ್ಟರು ಟಾಯಿಪ ಮಾಡುವದರಲ್ಲಿ ತೊಡಗಿದರು. ಜವಾನರು ಕೈಯಲ್ಲಿದ್ದ ಬೀಡಿ ತುಂಡುಗಳನ್ನೆಸೆದು, ಸಾವರಿಸಿಕೊಂಡು ಎದ್ದುನಿಂತರು. ಗುಮಾಸ್ತರೆಲ್ಲ ತಮ್ಮೆದುರಿನ ಕಾಗದದ ರಾಶಿಯಲ್ಲಿ ಕೈಹಾಕಿ ತುಂಬುಕೆಲಸದಲ್ಲಿ ತೊಡಗಿದ ಭಾವವನ್ನು ಮುಖದ ಮೇಲೆ ತಂದಿರಿಸಿದರು. ಆಫೀಸಿನ ತುಂಬೆಲ್ಲ ಸ್ಮಶಾನಶಾಂತಿ ವ್ಯಾಪಿಸಿತು. ಬಿರುಗಾಳಿಯ ಪೂರ್ವದಲ್ಲಿಯ ಶಾಂತತೆಯ ನೆನಪನ್ನು ಮಾಡಿಕೊಡುತ್ತಿತ್ತು ಈ ಸ್ಮಶಾನಶಾಂತತೆ.

ಧರ್ಮ ಮಾರ್ತಂಡ ಗೋಪಾಲಸ್ವಾಮಿಯವರು ಆಫೀಸಿನ ಮಧ್ಯದಿಂದ ಹಾಯ್ದು ನೇರಾಗಿ ತಮ್ಮ ಕೋಣೆಗೆ ಹೋದರು. ಆ ರುದ್ರಗಂಭೀರ ಮೂರ್ತಿ ಕೋಣೆ ಸೇರುವ ವರೆಗೂ ಎಲ್ಲ ಕಾರಕೂನರ ಕೈಗಳು ನಡುಗುತ್ತಲೇ ಇದ್ದವು.

"ಟ್ರೆನ್....ಟ್ರೆನ್....ಟ್ರೆನ್...." ಗೋಪಾಲಸ್ವಾಮಿಯವರ ಕೋಣೆಯೊಳಗಿಂದ ಕರೆಯುವ ಗಂಟೆಯ ಸಪ್ಪಳವಾಯಿತು. ಕೂಡಲೇ ಆಫೀಸು ಜವಾನ ಕೋಣೆಯನ್ನು ಪ್ರವೇಶಿಸಿದ. ಆಫೀಸಿನಲ್ಲಿದ್ದ ಮೂವತ್ತು ಗುಮಾಸ್ತೆಯರ ಕಣ್ಣು ಜವಾನನು ತಿರುಗಿ ಬರುವದನ್ನು ನಿರೀಕ್ಷಣೆ ಮಾಡತೊಡಗಿದವು. ಆಫೀಸ ಜವಾನ ಒಮ್ಮೆ ಹೊರಗೆ ಬಂದು, ಸುಬ್ಬನ ಬಳಿ ಸಾರಿ "ಸಾಹೇಬರು ತಮ್ಮನ್ನು ಕರೆದಿದ್ದಾರೆ" ಎಂದು ಹೇಳಿದ. ಅದರ ನಿರೀಕ್ಷಣೆಯಲ್ಲಿಯೇ ಇದ್ದ ಸುಬ್ಬಣ್ಣ ನಿರ್ವಿಕಾರನಾಗಿಯೇ ಕೋಣೆಯನ್ನು ಪ್ರವೇಶಿಸಿದನು.

ಗುಮಾಸ್ತರ ತಂಡವೆಲ್ಲ ಕಾಲುಸಪ್ಪಳವನ್ನೇನೂ ಮಾಡದೆ ಹಾಗೆಯೇ ಖೋಲಿಯ ಹೊರಬದಿಗೆ ಕೂಡಿತು. ನಡೆಯುವ ಗಲಾಟೆಯ ಬಗ್ಗೆ ಕುತೂ

ಹಲಿತವಾಗಿತ್ತು ಆ ತಂಡ, ವಾಸಂತಿಗೆ ಕೂತಲ್ಲಿಂದಲೇ ಒಳಗಿನ ಸಂಭಾಷಣೆ ಕೇಳುತ್ತಿತ್ತು.

ಕೋಣೆಯಲ್ಲಿ ಸಾಹೇಬರ, ಗಂಭೀರ ಧ್ವನಿಯಲ್ಲಿ ಮಾತನಾಡಲು ಪ್ರಾರಂಭಿಸಿದರು:

" ನೀನು ಎಲ್ಲಿಂದ ಬಂದೆ, ಹೇಗೆ ಬಂದೆ, ಗೊತ್ತಿದೆಯೆ ? "

" ಗೊತ್ತಿದೆ. "

" ಮಾರುತ್ತರ ಕೊಡ್ತೀಯಾ ? "

" ನಿರುದ್ಯೋಗಿಯಾಗಿ, ಮೈಮೇಲೆ ಅರಿವೆ ಇಲ್ಲದೇ ನೌಕರೀ ಕೇಳಲು ಬಂದಿದ್ದೆ. "

" ತಾವು ದೊಡ್ಡ ಮನಸ್ಸು ಮಾಡಿ ನೌಕರಿ ಕೊಟ್ಟಿರಿ ತಮಗೆ ನಾನು ಉಪಕೃತ "

" ಆ ಉಪಕಾರದ ಪ್ರತಿಫಲವನ್ನು ಈ ರೀತಿಯಲ್ಲಿ ತೀರಿಸುವಿಯಾ ? "

" ನಾನು ಯಾವ ಅನ್ಯಾಯವನ್ನೂ ಮಾಡಿಲ್ಲ "

" ಇನ್ನೂ ಏನನ್ಯಾಯವಾಗುವುದು ಉಳಿದಿದೆ ? ನಾನಿರುವ ಆಫೀಸಿನಲ್ಲಿ ಇಂಥವರಿಗೆ ಎಡೆ ಇಲ್ಲಾ "

" ಅಷ್ಟು ದೂರ ಹೋಗಿ ನನ್ನ ಹೊಟ್ಟೆಯ ಮೇಲೆ ಕಾಲಿಡಬೇಡಿ "

" ಹಾಗಾದರೆ ನಾನು ಹೇಳಿದಂತೆ ನಡೆಯುತ್ತೀಯಾ ? "

" ತಮ್ಮ ಆಜ್ಞೆ ಏನು ? "

" ನೀನೂ ವಾಸಂತಿ ಇಬ್ಬರೂ ಇನ್ನೂ ಅನೀತಿಯಮಟ್ಟವನ್ನು ದಾಟಿಲ್ಲವೆಂದು ನಾನು ಭಾವಿಸುತ್ತೀನೆ. "

" ದೇವರಸಾಕ್ಷಿಯಾಗಿ ನಾವಿನ್ನೂ ಅನೀತಿಯ ಮಟ್ಟವನ್ನು ದಾಟಿಲ್ಲ— ಆದರೆ— "

" ಆದರೆ ಗೀದರೆ ಬೇಕಿಲ್ಲ. ನೀನು ಅವಳನ್ನು ಲಗ್ನವಾಗುವ ಮಾತನ್ನು ಮರೆತು ಬಿಡು. ನಮ್ಮ ಧರ್ಮ ಅಚ್ಚಳಿಯದೆ ಬೆಳೆದು ಬಂದ ರೀತಿಯಲ್ಲಿ ಉಳಿಯಬೇಕು. "

"ಆದರೆ ನಾವಿಬ್ಬರೂ ಲಗ್ನದ ವಚನದಿಂದ ಬಂಧಿತರಾಗಿದ್ದೇವೆ. ನಮ್ಮಿಬ್ಬರಲ್ಲಿ ಮಾನಸ ವಿವಾಹ ಯಾವಾಗಲೋ ನಡೆದು ಹೋಗಿದೆ. ಕೇವಲ ದೈಹಿಕ ಸಂಬಂಧಕ್ಕಾಗಿ ನಾಲ್ಕು ಜನರ ಕಣ್ಣೆದುರಿನಲ್ಲಿ ಲಗ್ನವನ್ನು ಮಾಡ ಬೇಕಾಗಿದೆ ಅಷ್ಟೆ."

"ಧರ್ಮಭ್ರಷ್ಟ! ನನ್ನೆದುರಿನಲ್ಲಿ ಇವೆಲ್ಲ ಮಾತನಾಡ್ತೀಯಾ? ಧರ್ಮ ಲಂಡರಿಗೆ ನನ್ನ ಆಫೀಸಿನಲ್ಲಿ ಪ್ರವೇಶವಿಲ್ಲ. ಇಂದೇ, ಇದೇ ಹೊತ್ತಿಗೆ ಹೊರ ಬೀಳು. ನಿನ್ನ ನೌಕರೀ ಇಂದೇ ಮುಕ್ತಾಯ. ಇಷ್ಟೇ ಅಲ್ಲ ಕೇಳು. ನಿನ್ನದು ಬ್ಯಾಡ್ ಕಾಂಡಕ್ಟ ಅಂತ ಜಾಹೀರ ಪಡಿಸುವೆ ಮತ್ತೆಲ್ಲಿಯೂ ನಿನಗೆ ನೌಕರಿ ಸಿಕ್ಕದು. ಹೊಟ್ಟೆಗೆ ಕೂಳಿಲ್ಲದೆ ಚಡಪಡಿಸಿ ಸಾಯು. ಧರ್ಮ ಲಂಡರಿಗೆ ಇದೇ ಶಿಕ್ಷೆ."

"ಧರ್ಮಲಂಡ ನಾನಲ್ಲ—ಆ—ರೆ—ಇರಲಿ. ಈಗ ನಾನು ನಿಮ್ಮ ನವಕರನಲ್ಲ. ಹೇಳಬೇಕೆಂದರೆ ಬೇಕಾದಷ್ಟನ್ನೂ ಹೇಳಬಹುದು. ಆದರೆ ನಿಮ್ಮ ಜತೆಯಲ್ಲಿ ಮಾತನಾಡುವ ಇಚ್ಛೆ ನನಗಿಲ್ಲ. ಧರ್ಮದ ಹೆಸರಿನಲ್ಲಿ ನೂರಾರು ಜನರನ್ನು ಅಧರ್ಮಕ್ಕೆ ಎಳೆಯುತ್ತಿದ್ದೀರಿ."

"Shut up. Get out."

"ಬರುವೆ, ನಮಸ್ಕಾರ!"

"ಸುಬ್ಬ ಸಾಹೇಬರ ಕೋಣೆಯಿಂದ ಹೊರಬರುವ ಸದ್ದನ್ನು ಕೇಳಿ, ಹೊರಗೆ ಕೂಡಿದ ಗುಮಾಸ್ತರ ತಂಡ ಮತ್ತೆ ಚದುರಿತು. ಸುಬ್ಬ ನೇರಾಗಿ ಆಫೀಸಿನ ತಲೆಬಾಗಿಲಿಗೆ ಬಂದು ಎಲ್ಲರಿಗೂ ಅಲ್ಲಿಂದಲೇ ನಮಸ್ಕರಿಸಿ ಹೊರ ಬಿದ್ದು ಹೋದ.

ಟಾಯಿಪು ಯಂತ್ರದ ಮೇಲೆ ಗದ್ದವನ್ನು ಆನಿಸಿಕೊಂಡು ಕುಳಿತ ವಾಸಂತಿಗೆ ತನ್ನ ಕತ್ತನ್ನು ಮೇಲಕ್ಕೆತ್ತುವ ಧೈರ್ಯವಾಗಲಿಲ್ಲ. ಅವಳ ಕಣ್ಣೊಳಗಿನ ಹನಿಗಳು ಮಾತ್ರ ಟಾಯಿಪ ಯಂತ್ರವನ್ನು ತೋಯಿಸಿ ಒದ್ದೆ ಮಾಡಿಬಿಟ್ಟಿತ್ತು.

ಸುಬ್ಬನಿಗೆ ಬೆಂಗಳೂರು ಹೊಸದು. ಆದರೂ ಅಲೆ ಅಲೆಯುತ್ತಾ ಬೆಂಗಳೂರಿಗೆ ಬಂದು ಒಂದು ವಾರ ಸಂದಿದೆ. ಬೆಂಗಳೂರು ಅವಾಧವ್ಯವಾಗಿ ಬೆಳೆದಿದ್ದರೂ, ಸ್ನೇಹ ಪರಿಚಯವೇನೂ ಇಲ್ಲದ ಸುಬ್ಬನಿಗೆ ನೌಕರಿ ಸಿಗಬೇಕೆಲ್ಲಿ ? ತಾನು ಬೆಂಗಳೂರಿಗೆ ಬಂದು, ಅಲ್ಲಿ ಉದ್ಯೋಗವನ್ನು ಸಂಪಾದಿಸಿಕೊಂಡು, ವಾಸಂತಿಯನ್ನು ಕರೆಸಿ ಲಗ್ನ ಮಾಡಿ ಸುಖವಾಗಿರೋಣ ಎಂಬ ಕಲ್ಪನೆಯ ಕನಸಿನಲ್ಲಿ ಸುಬ್ಬ ಬೆಂಗಳೂರನ್ನು ಸೇರಿದ್ದ. ಆದರೆ ಇಂದು ಏಳು ದಿನಗಳಿಂದ ಅಲೆಯುತ್ತಿದ್ದ ಸುಬ್ಬನಿಗೆ ಬೆಂಗಳೂರಿನ ಕಹೀ ಅನುಭವ ಬಂದು ಹೋಗಿತ್ತು. ಬಸವನ ಗುಡಿ, ರಸೆಲ್ ಮಾರ್ಕೆಟ, ಮಲ್ಲೇಶ್ವರಂ, ಶ್ರೀರಾಮಪುರ, ಎಲ್ಲವನ್ನೂ ಕಾಲ್ನಡಿಗೆಯಲ್ಲಿಯೇ ಸುತ್ತುಹಾಕಿದ್ದನು. ನೌಕರಿ ಎಲ್ಲಿಯೂ ಸಿಕ್ಕಿರಲಿಲ್ಲ. ಕ್ಯಾಂಟೋನಮೆಂಟಿನ ಬೀದಿಬೀದಿಯನ್ನು ಅಲೆದರೂ ಒಂದೇ ಉತ್ತರ ಸಿಕ್ಕಿತು. ಈ ೭ ದಿನಗಳಲ್ಲೂ ಕೂಡಿಸಿಟ್ಟ ಚಿಕ್ಕ ಕೈಗಂಟು ತೀರಿ ಹೋಯಿತು. ಇಂದು ಅವನು ಒಂದು ದೃಢ ನಿರ್ಧಾರಕ್ಕೆ ಬಂದು ಬಿಟ್ಟ. ಉಲ್ಸೂರ ಕಡೆಗೆ ಕಾಲ್ನಡಿಗೆಯಿಂದಲೇ ನಡೆದ. ಮೈಮೇಲಿನ ಬಟ್ಟೆಗಳೆಲ್ಲ ಮಾಸಿವೆ. ತಲೆಯ ಕೂದಲು ಕೆದರಿ ಹೋಗಿವೆ. ಕ್ಯಾಂಟೋನಮೆಂಟಿನಲ್ಲಿ ಅವನೊಬ್ಬ ತಮಿಳು ಕೂಲಿಯವನಾಗಿ ಕಾಣತೊಡಗಿದ್ದ. ದಾರಿಯಲ್ಲಿ ಸಿಕ್ಕ ಜನ ಹಾಗೆ ತಿಳಿದು ಕೂಲಿಯನ್ನಾದರೂ ಕೇಳಿದರೆ ಅವರ ಕೂಲಿಯವನಾಗಲು ಸುಬ್ಬ ಈಗ ತಯಾರು ಆಗಿದ್ದ. ಆದರೆ ಬೆಂಗಳೂರಲ್ಲಿ ಕೂಲಿಯವರ ಸಂಖ್ಯೆಯು ಅತಿಮಿತಿಯಾಗಿ ಬೆಳೆದು ಬಿಟ್ಟಿತ್ತು. ಸುಬ್ಬ ಉಲ್ಸೂರ ಟ್ಯಾಂಕನ್ನು ಮುಟ್ಟಬೇಕಾದರೆ ಸಂಜೆ ೫–೫॥ ಹೊಡೆದುಹೋಗಿತ್ತು. ಹೊಟ್ಟೆಯಲ್ಲಿ ಆಹಾರವಿಲ್ಲದ್ದರಿಂದ ಮೊದಲೇ ತುಂಬಾ ದಣಿವಾಗಿತ್ತು. ಬದಿಯ ಹುಲ್ಲಿನ ಮೇಲೆ ಹಾಯಾಗಿ ಒರಗಿದ. ದಣಿವಾಗಿದ್ದರಿಂದ ಒಂದು ಕಡೆ ತುಂಬಾ ನಿದ್ರೆ ಬರುತ್ತಿತ್ತು. ಆದರೆ 'ಬರೀ ಹೊಟ್ಟೆ ಆ ನಿದ್ರೆಯನ್ನು ಹೊಡೆದು ಹೊರಗೆ ಹಾಕುತ್ತಿತ್ತು. ಈ ದ್ವಂದ್ವದಲ್ಲಿ ಸುಬ್ಬ ಮಾತ್ರ ಗಾಸಿಯಾಗಿ ಬಿಟ್ಟಿದ್ದ. ಹಾಗೇ ಕಣ್ಣು ಮುಚ್ಚಿಕೊಂಡ. ಅವನ ಮನಸ್ಸು ಮಾತ್ರ ವಿಚಾರಿಸತೊಡಗಿತು.

" —ತಾನು ಬಾಲವಿಧವೆ ವಾಸಂತಿಗೆ ವಚನ ಕೊಟ್ಟು ಬಂದಿದ್ದಾನೆ. ಆದರಂತೆ ನಡೆಯದಿದ್ದರೆ ತಾನು ವಚನಭ್ರಷ್ಟ ಇದೆಲ್ಲ ಅನಿಷ್ಟಕ್ಕೆ ಕಾರಣ

ರಾರು ತಾನೇ—ಛೇ, ಅಲ್ಲ—ವಾಸಂತಿಯೋ—ಅವಳೂ ಅಲ್ಲ—ಹಾಗಾದರೆ ಈ ಅನಿಷ್ಟಕ್ಕೆ ಧರ್ಮಮಾರ್ತಂಡ ಗೋಪಾಲಸ್ವಾಮಿಯವರು !—ಗೋಪಾಲ ಸ್ವಾಮಿ ಧರ್ಮಮಾರ್ತಂಡ—"

ಸಿಟ್ಟಿನ ಭರದಲ್ಲಿ ಸುಬ್ಬ "ಧರ್ಮ ಮಾರ್ತಂಡ" ರ ಹೆಸರಿನಿಂದ ಹಲ್ಲು ಕಡಿಯುವಾಗ ಅವನ ನಾಲಿಗೆ ಆ ಹಲ್ಲುಗಳ ನಡುವೆ ಸಿಕ್ಕು ಗಾಸಿಯಾಯಿತು. ಸುಬ್ಬ ನಕ್ಕ ಮಾತ್ರ. ಬಡವರ ಸಿಟ್ಟೆಂದರೆ ಹೀಗೆ. ಸುಬ್ಬ ತನ್ನ ಹಿಂದಿನ ದಿನಗಳನ್ನು ನೆನಿಸುವದನ್ನು ಒಮ್ಮೆಲೆ ನಿಲ್ಲಿಸಬೇಕಾಯಿತು.— ಅದಕ್ಕೆ ಕಾರಣವೆಂದರೆ, ನವಯುವಕನೊಬ್ಬ ಅವನ ಎದುರಿನಲ್ಲಿ ಬರತೊಡಗಿದ್ದ. ಆ ನವಯುವಕ ತೀರ ಹತ್ತಿರ ಬಂದಾಗ, ಸುಬ್ಬ ಎದ್ದು ನಿಂತ

"I can use him as my tool" ಎಂದು ಆ ವ್ಯಕ್ತಿ ತನ್ನಷ್ಟಕ್ಕೆ ತಾನೇ ಪುಟುಪುಟಿಸಿದ "ಏನಯ್ಯಾ, ತುಂಬಾ ದಣಿದಿದ್ದೀಯಾ ?"

"ಹೌದು ಸ್ವಾಮಿ, ನನಗೆ ತುಂಬಾ ದಣಿವು. ಏಳು ದಿನಗಳಿಂದ ಒಪ್ಪತ್ತೇ ಊಟ ಮಾಡುತ್ತಿದ್ದೇನೆ."

"ನಿಮ್ಮ ಊರು ಯಾವುದು ?"

"ಬಡವರಿಗೆಲ್ಲ ಊರು ಇರ್ತಾವೇ ?"

"ಊರಿಲ್ಲದಿದ್ದರೂ ಹೆಸರಾದರೂ ಇದೆ ಅಲ್ಲವೇ ?"

"ನನ್ನ ಹೆಸರು ಸುಬ್ಬ."

"ಬೆಂಗಳೂರಿಗೆ ಬಂದು ಬಹಳ ದಿನವಾಯ್ತೋ ?"

"ಇಲ್ಲಾ ಸ್ವಾಮಿ, ಏನಾದರೂ ಉದ್ಯೋಗ ದೊರಕಿಸಿಕೊಳ್ಳೋಣ ಅಂತಾ ಈಗ ಬಂದಿದ್ದೀನಿ."

"ಸರಿ ಒಳ್ಳೇದಾಯ್ತು. ಇನ್ನೂ ಏನೂ ಉದ್ಯೋಗ ದೊರಕಿಲ್ಲವಷ್ಟೇ ?"

"ಇಲ್ಲ ಸ್ವಾಮಿ."

"ಹಾಗಾದರೆ ನಮ್ಮಲ್ಲಿ ಒಂದು ಕೆಲ್ಸ ಆಗಬೇಕಾಗಿದೆ ಮಾಡುವಿಯಾ ?

"ದೇವರೇ ನನ್ನ ಹತ್ತಿರ ನಿಮ್ಮನ್ನು ಕಳಿಸಿದ್ದಾನೆ."

"ನಿನಗೆ ಕೈತುಂಬಾ ಹಣ ಕೊಡುವೆ. ನೀನು ಪ್ರಾಮಾಣಿಕನಾಗಿ ಕೆಲ್ಸ ಮಾತ್ರ ಮಾಡಬೇಕು."

ಪ್ರಾಮಾಣಿಕನಾಗಿರಬೇಕು ಎಂದಾಕ್ಷಣವೇ ಮೊದಲು ಸುಬ್ಬ ಅಂಜಿದ. ಒಮ್ಮೆ ಆ ಯುವಕನನ್ನು ನಖಶಿಖಾಂತ ದೃಷ್ಟಿಸಿದ.

ಅಂದವಾಗಿ ಬಾಚಿದ ತಲೆ, ಕುತ್ತಿಗೆಯಲ್ಲಿ ಟಾಯ್, ಸರ್ಜ ಸೂಟ. ಬೂಟು ಇವುಗಳಿಂದ ಅಲಂಕೃತವಾದ ಯುವಕನನ್ನು ನೋಡಿ ಸುಬ್ಬನ ಸಂದೇಹ ಮಾಯವಾಯಿತು. ಪ್ರಾಮಾಣಿಕನಾಗಿರಬೇಕು ಎಂಬುವದರ ಅರ್ಥ, ಕಳ್ಳರು ತಮ್ಮ ಜತೆಯ ಕಳ್ಳರ ಜತೆಯಲ್ಲಿ ಪ್ರಾಮಾಣಿಕರಾಗಿರುತ್ತಾರೆ ಎಂಬ ಮಾತನ್ನು ಸುಬ್ಬ ಕೇಳಿದ್ದ. ಆ ಸಂದೇಹ ಅವನನ್ನು ಆ ಮಾತಿಗೆ ಹಚ್ಚಿತ್ತು.

ಇದನ್ನೆಲ್ಲ ವಿಚಾರಿಸುವ ಮೊದಲೇ ಸುಬ್ಬನ ಕೈಯಲ್ಲಿ ೧೦ರ ೫ ನೋಟುಗಳು ಬಂದವು. ಕೂಡಲೇ ಅವನ ಕಾಲುಗಳನ್ನು ಹಿಡಿದು ಅವನ ಉಪಕಾರವನ್ನು ಸ್ಮರಿಸಲಾ ಎಂದು ವಿಚಾರಿಸಿದ.

ಬಂದ ಯುವಕ ಸುಬ್ಬನಿಗೆ ತನ್ನನ್ನು ಹಿಂಬಾಲಿಸುವದಕ್ಕೆ ಹೇಳಿ ಟಾರ್ ರೋಡಿಗೆ ಇಳಿದ. ಇಬ್ಬರೂ ಬೆಂಗಳೂರ ಕ್ಯಾಂಟೋನ್‌ಮೆಂಟಿನ ಬಸ್ಸನ್ನು ಹಿಡಿದರು. ಬಸ್ಸು ರಸೆಲ ಮಾರ್ಕೆಟಿನ ಸ್ಟ್ಯಾಂಡಿಗೆ ಬರುವದರಲ್ಲಿ ರಾತ್ರಿ ೮॥ ಹೊಡೆದು ಹೋಗಿತ್ತು. ಬಸ್ಸಿನಿಂದ ಕೆಳಗಿಳಿಯುವ ಮೊದಲು ಸುಬ್ಬ ಆ ಯುವಕನಿಗೆ ತನ್ನ ಹೊಟ್ಟೆ ಹಸಿವಾದುದರ ಬಗ್ಗೆ ಹೇಳಿಕೊಂಡಿದ್ದ. “ಮನೆಯನ್ನಾದರೂ ಮುಟ್ಟುವಾ ನಡೆ. ಮಹಾರಾಜನ ಹಾಗೆ ಊಟ ಮಾಡಿ ವಿಶ್ರಾಮ ತೆಗೆದುಕೊಳ್ಳುವಿಯಂತೆ.” ಎಂದು ಆ ಯುವಕ ಉತ್ತರಿಸಿದ. ಸುಬ್ಬ ನೇರವಾಗಿ ಯುವಕನನ್ನು ಹಿಂಬಾಲಿಸಿದ.

ಯುವಕ ರಸೆಲ್ ಮಾರ್ಕೇಟಿಗೆ ಬಂದು ಕೆನ್ನಲರೀ ರೋಡಿಗೆ ಇಳಿದು, ಮುಂದೆ ಕಿರಿದಾದ ಓಣಿಯಲ್ಲಿ ಒಳನಡೆದು, ಮುಂದೆ ಆ ಕಿರಿದಾದ ಓಣಿಯಲ್ಲಿಯೇ ಒಂದು ದೊಡ್ಡ ಮನೆಗೆ ಬಂದು ನಿಂತ. ಮನೆಯ ಮುಂಬಾಗಿಲ ಹಾಕಿದ್ದಿತು. ಯುವಕ ಜವಾನನ ಹೆಸರನ್ನು ಕೂಗಿದ. ಜವಾನ ಬರುವ ಅವಧಿಯೊಳಗೇ ಸುಬ್ಬಣ್ಣ ಪ್ರಶ್ನಿಸಿದ:

“ರಾಯರೇ, ಇದು ತಮ್ಮ ಮನೆಯೋ ?”

“ಹಾಗೇ ಅನ್ನಬಹುದು. ಕೆಲವೊಂದು ಕೆಲಸದ ಸಲುವಾಗಿ ಈ ಮನೆಯನ್ನು ಬಾಡಿಗೆಯಿಂದ ಹಿಡಿದಿದ್ದೇನೆ. ಒಂದು ತಿಂಗಳಾಯಿತು. ನನ್ನ ಸ್ವಂತ

ಮನೆ ಸಿಟಿಯಲ್ಲಿದೆ. ”

ಯುವಕನ ಉತ್ತರದಿಂದ ಸುಬ್ಬನಿಗೆ ಸಮಾಧಾನವಾಗಲಿಲ್ಲ ಊರ ಲ್ಲೊಂದು ಮನೆ, ಕ್ಯಾಂಟೋನಮೆಂಟಿನಲ್ಲೊಂದು. ಒಂದೂ ತಿಳಿಯಲಿಲ್ಲ ಎಂದು ತನ್ನಷ್ಟಕ್ಕೆ ತಾನೇ ತಲೆ ತುರಿಸಿಕೊಂಡ.

ಅಷ್ಟರಲ್ಲಿ ಜವಾನ ಬಂದು ಬಾಗಿಲನ್ನು ತೆಗೆದ. ಮನೆಯಲ್ಲಿ ಯಾವ ಓರಣವೂ ಇರಲಿಲ್ಲ. ಹೊಸದಾಗಿಯೇ ಬಾಡಿಗೆ ಹಿಡಿದಿದ್ದು ಎಂದು ಅದ ರೊಳಗಿನ ವ್ಯವಸ್ಥೆಯಿಂದ ತಿಳಿಯಬಹುದಿತ್ತು. ಯುವಕ ತನ್ನ ಜವಾನನಿಗೆ ಸುಬ್ಬನ ಯೋಗ ಕ್ಷೇಮವನ್ನು ನೋಡಿಕೊಳ್ಳಲು ಹೇಳಿ, ತಾನು ಒಳಗೆ ಹೋದ.

ಜವಾನ ತುಂಬ ಮುದುಕನಾಗಿದ್ದ. ಸುಬ್ಬನನ್ನು ಒಂದು ಖೋಲಿ ಯಲ್ಲಿ ಇರಹೇಳಿ, ಅವನ ಊಟದ ತಟ್ಟೆಯನ್ನು ಅಣಿಮಾಡತೊಡಗಿದ.

ರಾತ್ರಿ ಹತ್ತು ಹೊಡೆದು ಹೋಗಿತ್ತು. ಸುಬ್ಬ ಎಷ್ಟೋ ದಿನಗಳ ನಂತರ ಹೊಟ್ಟೆತುಂಬ ಊಟ ಕಂಡಿದ್ದ. ಏಳು ದಿನಗಳ ದಣಿವಿನ ಮೇಲೆ ಮೃಷ್ಟಾನ್ನ ಭೋಜನ ಸಿಕ್ಕಿದ್ದರಿಂದ ಅವನು ಕೂತಲ್ಲಿಯೇ ತೂಕಡಿಸತೊಡ ಗಿದ್ದ. ಹಾಗೇ ತೂಕಡಿಸುತ್ತಿರುವಂತೆ ಮಹಡಿಯ ಮೇಲಿಂದ ಯುವಕನ ಕೂಗು ಕೇಳಿಬಂತು. “ ಸುಬ್ಬಾ, ಏ ಸುಬ್ಬಾ. ”

ಸುಬ್ಬ ಮೆಟ್ಟಲುಗಳನ್ನೇರಿ ಮೇಲೆ ನಡೆದ. ಒಂದು ಕೋಣೆಯಲ್ಲಿ ಯುವಕ ಕೂತಿದ್ದ. ಸುಬ್ಬ ಹೋಗಿ ಅವನೆದುರು ನಿಂತ.

ಯುವಕ ಸಾವಧಾನವಾಗಿ ಹೇಳತೊಡಗಿದ: “ ನಾನು ನಿನ್ನನ್ನು ಕರೆದು ತಂದದ್ದು ಒಂದು ದೊಡ್ಡ ಕೆಲಸಕ್ಕೆ. ಇಂಥ ಕೆಲಸ ಮಾಡಲು ಅತಿ ಬಡವ, ಅತಿ ಪ್ರಾಮಾಣಿಕನಿರಬೇಕು. ನಿನ್ನಲ್ಲಿ ಎರಡನ್ನೂ ಕಂಡೆ. ನಿನ್ನಿಂದ ಆಗಬೇಕಾದ ಕೆಲಸ ಸ್ವಲ್ಪ ಕಠಿಣವಿದೆ. ಅದಕ್ಕೆ ನಿನ್ನ ಬೇಡಿಕೆ ಎಷ್ಟು ಹೇಳು. ”

“ ಕೆಲಸವಾದರೂ ಏನು ಹೇಳಿ ? ”

“ಕೆಲಸ ಕಡೆಗೆ. ಮೊದಲು ಹಣವೆಷ್ಟು ಬೇಕು ಕೇಳು?”

“ ? ”

“ಆಯಿತು; ೫೦೦ ರೂಪಾಯಿ ಕೊಡುತ್ತೇನೆ. ಎಲ್ಲಿಯೂ ಬಾಯಿ ಬಿಡಬೇಡ.”

“೫೦೦ ರೂಪಾಯಿ ಎಂದ ಕೂಡಲೇ ಸುಬ್ಬ ಗಗನಕ್ಕೆಯೇ ಹಾರಿ ಹೋದ. ಆ ಉತ್ಸಾಹದಲ್ಲಿ “ಕೆಲಸವೇನು, ಬೇಗ ಹೇಳಿ” ಎಂದ.

ಆ ಯುವಕ ಸಮಾಧಾನವಾಗಿಯೇ ಹೇಳತೊಡಗಿದ: “ನಾನು ಕಾಲೇಜಿನಲ್ಲಿ ಓದುತ್ತಿದ್ದೇನೆ. ನಾನು ಆಗರ್ಭ ಶ್ರೀಮಂತ. ಅಲ್ಲಿ ಒಬ್ಬ ಸಹಾಧ್ಯಾಯಿನಿಯ ಜತೆಯಲ್ಲಿ ಪ್ರಣಯ ಬೆಳೆಯಿತು. ಆ ಪ್ರಣಯ, ಆ ಹುಡುಗಿ ಗರ್ಭವತಿಯಾಗುವ ವರೆಗೂ ಸಾಗಿತು ಗರ್ಭನಿರೋಧಕಕ್ಕಾಗಿ ಎಷ್ಟು ಔಷಧಿಗಳನ್ನು ಬಳಿಸಿದರೂ, ಪರಿಣಾಮ ಸರಿಯಾಗಲಿಲ್ಲ. ಅವಳು ನಿನ್ನೆಯೇ ಗಂಡುಕೂಸನ್ನು ಹೆತ್ತಿದ್ದಾಳೆ. ಅಷ್ಟರ ಸಲುವಾಗಿ ಕ್ಯಾಂಟೋನ ಮೆಂಟಿನಲ್ಲಿ ಈ ಮನೆಯನ್ನು ಬಾಡಿಗೆಗಾಗಿ ತೆಗೆದುಕೊಂಡಿದ್ದೇನೆ ಈಗ ಅವಳು, ಆ ಕೂಸು ಈ ಬದಿಕೋಣೆಯಲ್ಲಿದ್ದಾಳೆ. ನಿನ್ನ ಮುಖ್ಯ ಕೆಲಸವೆಂದರೆ ಆ ಕೂಸನ್ನು ಇಂದು ರಾತ್ರಿ ಎಲ್ಲಿಯಾದರೂ ದೂರ ಒಯ್ದು ಎಸೆದು ಬಿಡುವದು—”

ಕೇಳುತ್ತಿರುವಂತೆ ಮೈತುಂಬ ಬೆವೆತ ಸುಬ್ಬ ಒಮ್ಮೆಲೆ, “ಜೀವಂತ ಕೂಸನ್ನು ಒಗೆಯುವದು ನನ್ನಿಂದಾಗದ ಮಾತು” ಎಂದು ಹೇಳಿದ.

“ಕೂಸು ಜೀವಂತವಿಲ್ಲ. ಅದು ಭೂಮಿಯ ಮೇಲೆ ಬರುತ್ತಲೂ ಅದರ ತಾಯಿ ಅದರ ಕತ್ತನ್ನು ಹಿಸುಕಿದ್ದಾಳೆ. ನಿನ್ನ ಕೆಲಸ ಇನ್ನೂ ಸುಲಭ.”

“............”

“ಏಕೆ ಸುಮ್ಮನೇ ನಿಂತೆ? ೫೦೦ ರೂಪಾಯಿ ಕಡಿಮೆ ಬೀಳುತ್ತಿದ್ದರೆ ಇದೊಂದು ನೂರು.” ೬೦೦ ರೂಪಾಯಿಗಳು ಸುಬ್ಬನ ಕಿಸೆ ಸೇರಿದವು. ಸುಬ್ಬ ಮುಗ್ಧನಾಗಿ ನಿಂತುಬಿಟ್ಟ. ಒಂದೆಡೆ ಪಾಪ, ಇನ್ನೊಂದೆಡೆ ೬೦೦ ರೂಪಾಯಿಗಳ ನೋಟು. ಇವುಗಳ ನಡುವೆ ಸುಬ್ಬ ಪೇಚಾಡತೊಡಗಿದ್ದ.

ಸುಬ್ಬನ ಮೂಕವೃತ್ತಿ ಸಮ್ಮತಿಯನ್ನು ಸೂಚಿಸತೊಡಗಿತು. ಯುವಕ ಸುಬ್ಬನಿಗೆ ಒಳಬರಹೇಳಿದ.

ಖೋಲಿಯಲ್ಲಿ ಒಳಸೇರುವಾಗ ಆ ಹೆಣ್ಣು ಗೋಡೆಯ ಕಡೆಗೆ ಮಾರಿ ಮಾಡಿ ಮಂಚದ ಮೇಲೆ ಕುಳಿತಿದ್ದಳು. ಸುಬ್ಬ ಒಳಗೆ ಬಂದು ಮರದಲ್ಲಿಟ್ಟ ಕೂಸನ್ನು ನೋಡಿದ. ನಿಷ್ಕಪಟ ಶಿಶು ಸತ್ತು ಬಹಳ ಹೊತ್ತಾಗಿತ್ತು. ಸುಬ್ಬಣ್ಣ ಶಿಶುವನ್ನು ಕೈಯಲ್ಲೆತ್ತಿದ. ಇನ್ನು ಖೋಲಿಯಿಂದ ಹೊರಡುವದರಲ್ಲಿದ್ದ ಅಷ್ಟರಲ್ಲಿ ಆ ಹೆಣ್ಣು ಕೂಗಿತು. "ಒಮ್ಮೆ ಆ ಮಗುವಿನ ಮಾರಿ ನೋಡಿ ಕೊಳ್ತೀನೆ." ಸುಬ್ಬನು ತಿರುಗಿದ. ಆ ಹೆಣ್ಣು ಮುಖ ತಿರುಗಿಸಿದಳು. ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು ಆ ಕ್ಷಣವೇ ಆ ಹೆಣ್ಣು ಒಮ್ಮೆಲೆ ಕಿರುಚಿ ತನ್ನ ಮುಖವನ್ನು ಮುಚ್ಚಿಕೊಂಡಿತು.

"ಅಯ್ಯೋ, ಎಲ್ಲವೂ ಘಾತವಾಯಿತು."

ಯುವಕ ಒಮ್ಮೆಲೆ ಅವಳನ್ನು ತಬ್ಬಿ "ವನಜಾ, ವನಜಾಕ್ಷಿ, ಇದೇನ. ಒಮ್ಮೆಲೇ ಹೀಗೆ ಕಿರುಚಿಕೊಂಡೆ."

ವನಜಾಕ್ಷಿ ಮುಚ್ಚಿದ ಮುಖವನ್ನು ತೆಗೆಯಲಿಲ್ಲ ಸುಬ್ಬನೇ ಉತ್ತರಿಸಿದ: "ಧರ್ಮ ಮಾರ್ತಂಡ ಗೋಪಾಲಸ್ವಾಮಿಯವರ ಮಗಳು ವನಜಾಕ್ಷಿ, ತನ್ನ ತಂದೆಯ ಹೆಸರಿಗೆ ಕಲಂಕ ಹತ್ತಬಹುದೆಂದು ಅಂಜಿರಬಹುದು. ಇಲ್ಲಿಯವರೆಗೆ ಎಲ್ಲವೂ ಗುಪ್ತವಿದೆ. ನಾನೂ ಬಾಯಿ ಬಿಡಲಾರೆ. ನಾನು ಉಂಡು ಮನೆಯ ಗಳವನ್ನೆಣಿಸಲಾರೆ. ನಿಮ್ಮಿಂದ ೭೦೦ ರೂಪಾಯಿ ಇಸಿದುಕೊಂಡು ನಿಮ್ಮ ಪಾಪವಲ್ಲಿ ಈಗ ಪಾಲುಗಾರನಿದ್ದೇನೆ. ಎಲ್ಲಿಯೂ ಬಾಯಿ ಬಿಡಲಾರೆ."

ಸುಬ್ಬಣ್ಣ ಅಲ್ಲಿ ನಿಲ್ಲದೆ ಕೂಸಿನ ಹೆಣ ಚೀಲದಲ್ಲಿರಿಸಿ ಹೊರಗೆ ನಡೆದುಬಿಟ್ಟ.

ಚನ್ನಪಟ್ಟಣದ ರೇಶನಿಂಗ ಆಫೀಸಿನಲ್ಲಿ ಧರ್ಮಮಾರ್ತಂಡ ಗೋಪಾಲಸ್ವಾಮಿಯವರು ತಮ್ಮ ಎಲ್ಲ ಕಾರಕೂನರ ಎದುರಿನಲ್ಲಿ ಅಂದಿನ ತಾಯಿನಾಡು ದಿನಪತ್ರಿಕೆಯನ್ನು ಓದಿ ತೋರಿಸಹತ್ತಿದ್ದರು.

"ಬೆಂಗಳೂರಿನ ಉಲ್ಸೂರ ಹತ್ತಿರ ಒಬ್ಬ ಮನುಷ್ಯ ವ್ಯಭಿಚಾರದಿಂದ ಹುಟ್ಟಿದ ಕೂಸನ್ನು ಕೊಂದು ಕೆರೆಯಲ್ಲಿ ಒಗೆಯಲು ಬಂದಾಗ ಪೋಲೀಸರು ಅವನನ್ನು ಹಿಡಿದರು. ಹೆಚ್ಚಿನ ತಪಾಸಣೆಯಲ್ಲಿ ಅವನು ಚನ್ನಪಟ್ಟಣದ ಒಬ್ಬ ಗುಮಾಸ್ತನೆಂದೂ, ಅವನ ನಡತೆ ಸರಿಯಾಗಿರದ್ದಕ್ಕೆ ಅವನನ್ನು ಧರ್ಮ ಮಾರ್ತಂಡ ಗೋಪಾಲಸ್ವಾಮಿಯವರು ಡಿಸ್‌ಮಿಸ್ ಮಾಡಿದ್ದರೆಂದೂ ಗೊತ್ತಾಗಿದೆ. ಅವನನ್ನು ಜೇಲಿಗೆ ಕರೆದೊಯ್ಯಲಾಯಿತು."

ಓದು ಮುಗಿಸಿದ ಧರ್ಮ-ಮಾರ್ತಂಡ ಗೋಪಾಲ ಸ್ವಾಮಿಯವರು ಒಂದು ಸಲ ಗಹಗಹಿಸಿ ನಕ್ಕರು. ಆಗ ಅವರ ನಗು ಅಲೆ ಅಲೆಯಾಗಿ ಆಫೀಸಿನ ತುಂಬೆಲ್ಲ ಪ್ರತಿಧ್ವನಿಸಿತು. ಟೈಯಿಪ ಟೇಬಲ್ಲಿನ ಮೇಲೆ ಕುಳಿತ ವಾಸಂತಿಯ ಮೈಮೇಲೆ ಧರ್ಮ ಮಾರ್ತಂಡ ಗೋಪಾಲ ಸ್ವಾಮಿಯವರ ಕರೀ ನೆರಳು ಬಿದ್ದಿತ್ತು. ಗೋಪಾಲಸ್ವಾಮಿಯವರ ಕೆಳಗಿನ ನೆರಳು ವಾಸಂತಿಯ ಭವಿಷ್ಯವನ್ನೇ ಹಾಳುಮಾಡಿತ್ತು.

---

# ಹೊಗೆಯಿಂದ ಹೊರಗೆ.



ದಿಲ್ಲಿ ರೆಫ್ಯೂಜಿ (ನಿರ್ವಾಸಿತ) ಕ್ಯಾಂಪಿನಲ್ಲಿ ಜಸವಂತಸಿಂಗ, ತೋಟ ಒಂದರಲ್ಲಿ ಗಿಡಬಳ್ಳಿಗಳಿಗೆ ನೀರನ್ನು ಹಣಿಸತೊಡಗಿದ್ದ. ಅಂದೇ ದಿಲ್ಲಿಯ ಆಲ್ ಇಂಡಿಯಾ ರೇಡಿಯೋದ ಅಸಿಸ್ಟಂಟ ಸ್ಟೇಶನ ಡಾಯರೆಕ್ಟರರು ಆ ಕ್ಯಾಂಪಿಗೆ ಸಂದರ್ಶನವೀಯುವವರಿದ್ದರು. ಸರದಾರ ದಯಾಲಸಿಂಗ, ಕ್ಯಾಂಪಿನ ಮ್ಯಾನೇಜರರು ಎಲ್ಲ ನಿರ್ವಾಸಿತರನ್ನು ಕರೆದು ಸಭೆ ಕೂಡಿಸಿ ಅವರಿಗೆ ಅಚ್ಚು ಕಟ್ಟಾಗಿಯೂ ಓರಣವಾಗಿಯೂ ಇರಲು ತಿಳಿಸಿದ. ಒಬ್ಬ ರಿಫ್ಯೂಜಿ ಕೇಳಿದ:

" ಏನು ಸರದಾರರೇ, ಮನೆ ಮಠಗಳನ್ನೇ ತೊರೆದು ಬೀದಿ ಬೀದಿ ಅಲೆಯುವ ನಮ್ಮಂಥವರು, ಎಷ್ಟು ಅಚ್ಚುಕಟ್ಟಾಗಿ ಇದ್ದರೇನು ಬಿಟ್ಟರೇನು ? " ಅದಕ್ಕೆ ದಯಾಲಸಿಂಗ ಕಳಕಳಿಯಿಂದ ಉತ್ತರಿಸಿದರು.

" ನೋಡು, ನೀವು ದುಃಖಿಗಳಿರೋದು ನಿಜ. ಅಚ್ಚುಕಟ್ಟಾಗಿರೋದಕ್ಕೆ, ಸೂಟು ಬೂಟುಗಳೇ ಇರಬೇಕೆಂದರ್ಥವಲ್ಲ. ಇದ್ದುದರಲ್ಲಿಯೇ ಸ್ವಲ್ಪ ಚನ್ನಾಗಿರೋದು. ಇದರಿಂದ ನಿಮಗೇನೇ ಲಾಭ. "

" ಲಾಭ ? ಅದೆಂಥ ಲಾಭ ? "

" ಹೌದಪ್ಪ ಹೌದು, ಲಾಭ. ಲಾಟ್ರಿ ಹತ್ತೋದಕ್ಕೂ ಭಾಗ್ಯ ಬೇಕಾಗುತ್ತದೆ. ಡಾಯರೆಕ್ಟರರ ಇವತ್ತಿನ ಸಂದರ್ಶನವು ಇಂದು ಲಾಟ್ರಿ ಇದ್ದ ಹಾಗೆಯೇ. "

" ಸರದಾರರೇ, ಏನು ಅದು ಬಾಯಿ ಬಿಚ್ಚಿ ಹೇಳಬಾರದೇ ? "

ದಯಾಲಸಿಂಗ ನಿಧಾನವಾಗಿ ಉತ್ತರಿಸಿದರು: " ಇವತ್ತು ಬರೋ ಡಾಯರೆಕ್ಟರ ಗಂಭೀರಸಿಂಗ ಈಗ ನಿಪುತ್ರಿಕರಾಗಿದ್ದಾರೆ. ತುಂಬಾ ಶಿರಿವಂತರು ಹಾಗೇ ತುಂಬಾ ಬುದ್ಧಿವಂತರು. ಅವರೂ ಪಶ್ಚಿಮ ಪಂಜಾಬದವರೇ. ಅಲ್ಲಿ

ಅವರ ಮಗ ಹೊಸದಾಗಿ ನಡೆದ ಈ ಕುರುಕ್ಷೇತ್ರ ಚಟುವಟಿಗೆಯಲ್ಲಿ ಬಲಿ ಹೋಗಿದ್ದಾನೆ. ಅದಕ್ಕೆಯೇ ಇವರಿಗೂ ನಿರ್ವಾಸಿತರ ಮೇಲೆ ತುಂಬ ಮಮತೆ. ತಮ್ಮಿಂದಾದಷ್ಟು ಸೇವೆ ಅವರಿಗೆ ಸಲ್ಲಿಸಬೇಕೆನ್ನುವದು ಅವರ ಇಚ್ಛೆ."

ಆ ನಿರ್ವಾಸಿತ ಕೇಳಿದ: "ಹಾಗಾದರೆ ಇಂದು ಅವರು ಎಲ್ಲರಿಗೂ ತಮ್ಮ ಟ್ರೆಝುರಿಯಲ್ಲಿಯ ಹಣವನ್ನು ಎಲ್ಲ ನಿರಾಶ್ರಿತರಿಗೆ ಹಂಚುತ್ತಾರೆಯೇ?"

"ಇಲ್ಲಾ ಮಹಾಸ್ವಾಮಿ, ಅವರೀಗ ದತ್ತು ತೆಗೆದುಕೊಳ್ಳಬೇಕೆಂದು ಇಲ್ಲಿ ಕ್ಯಾಂಪಿಗೆ ಬರುವವರಿದ್ದಾರೆ. ತಮಗೆ ಮನಸ್ಸಿಗೆ ಬಂದ ಹುಡುಗನನ್ನು ಅವರು ದತ್ತು ತೆಗೆದುಕೊಳ್ಳುವವರಿದ್ದಾರೆ. ಅದಕ್ಕೆ ಇದೊಂದು ಲಾಟ್ರಿ ಅಂತ ಹೇಳಿದ್ದು."

ನಿರ್ವಾಸಿತ ಅತ್ಯಾನಂದದಿಂದ ಕೂಗಿದ: "ದೇವರೇ, ನೀನೇ ಅವರ ಬಾಯಲ್ಲಿ ಹೋಗಿ ಕುಳಿತು ನನ್ನನ್ನಾರಿಸಪ್ಪ. ನನ್ನ ಮನೆಯ ಹತ್ತಿರವೇ ಒಂದು ಗುರುದ್ವಾರಾ ಕಟ್ಟಿಸ್ತೇನೆ."

ಆ ನಿರ್ವಾಸಿತನ ಮಾತಿಗೆ ಎಲ್ಲರೂ ಖೊಳ್ಳನೇ ನಕ್ಕು ಬಿಟ್ಟರು. ಆ ನಗುವಿನಲ್ಲಿ ಭಾಗ ವಹಿಸದೇ ಕುಳಿತವನೆಂದರೆ ಜಸವಂತಸಿಂಗನೇ. ಅವನ ಈ ಉದಾಸೀನತೆಗೆ ಒಂದು ಪ್ರಬಲ ಕಾರಣವಿತ್ತು.

ಸರದಾರ ದಯಾಲಸಿಂಗನ ಹುಕುಮಿನಂತೆ ಎಲ್ಲರೂ ತಂತಮ್ಮ ಕೆಲಸದಲ್ಲಿ ತೊಡಗಿದರು. ಜಸವಂತಸಿಂಗ ಮಾತ್ರ ತನ್ನ ಜಾಗೆ ಬಿಟ್ಟು ಕದಲಲಿಲ್ಲ. ಒಂದು ಸಲ ದಯಾಲಸಿಂಗ ಜಸವಂತಸಿಂಗನಿಗೆ ಮೃದುಸ್ವರದಲ್ಲಿ ವಿನಂತಿಸಿಕೊಂಡ. ಪ್ರಯೋಜನವಾಗಲಿಲ್ಲ. ಜಸವಂತಸಿಂಗ ಬಾಯಲ್ಲಿ ಹುಲ್ಲುಕಡಿಯನ್ನು ಕಚ್ಚಿಕೊಂಡು ಅದನ್ನು ಅತ್ತಿತ್ತ ತಿರುವಾಡುತ್ತ ಹಾಗೇ ಕುಳಿತುಕೊಂಡ. ದಯಾಲಸಿಂಗನಿಗೆ ತುಂಬಾ ಸಿಟ್ಟು ಬಂದಿತು. ಆದರೂ ಆ ಸಿಟ್ಟನ್ನು ಯಾವದೇ ನಿರ್ವಾಸಿತನ ಮೇಲೆ ಪ್ರಯೋಗಿಸುವ ಹಾಗಿರಲಿಲ್ಲ. ಕ್ಯಾಂಪಿನ ನಿಯಮಗಳೇ ಹಾಗಿದ್ದುವು. ಮೊದಲೇ ದುಃಖದಿಂದ ಬಳಲುವ ಜನರಮೇಲೆ ರೇಗಾಡಿ ಅವರ ದುಃಖವನ್ನು ದ್ವಿಗುಣಿತ ಮಾಡುವದು ಒಳ್ಳೆಯದಲ್ಲವೆಂದು ಆ ರೀತಿ ಪರಿಷ್ಕರು ನಿಯಮಗಳನ್ನು ಮಾಡಿದ್ದರು. ಒಂದೊಂದು ಸಲ ದಯಾಲಸಿಂಗನ ಸಿಟ್ಟು ಆ ನಿಯಮಗಳನ್ನು ಉಲ್ಲಂಘಿಸಿತ್ತು. ಎಷ್ಟೋ

ನಿರ್ವಾಸಿತರು ಅವನ ಸಿಟ್ಟಿನ ಪ್ರಸಾದವನ್ನು ಪಡೆದಿದ್ದರು. ಆದರೆ ಇಂದು ಮಾತ್ರ ದಯಾಲಸಿಂಗನಿಗೆ ತನ್ನ ಸಿಟ್ಟನ್ನು ಹಿಂದೂಡಲೇ ಬೇಕಾಗಿತ್ತು. ಏಕೆಂದರೆ ಡಾಯರೆಕ್ಟರ ಗಂಭೀರಸಿಂಗರು ಸಂದರ್ಶನವನ್ನೀಯುವವರಿದ್ದರು. ಎಲ್ಲಿಯಾದರೂ ತನ್ನ ಸಿಟ್ಟು ಅವರ ಕಿವೀವರೆಗೂ ಹೋಗಿ ಮುಟ್ಟಿದರೆ ತನ್ನ ಗತಿ ಏನು ಎನ್ನುವ ಭೀತಿ ಅವನಿಗಿತ್ತು. ಅದಕ್ಕೆಯೇ ದಯಾಲ, ಜಸವಂತ ಸಿಂಗನ ಜತೆಯುಲ್ಲಿ ಮೃದುಸ್ವರದಲ್ಲಿಯೇ ಮಾತಿಗಾರಂಭಿಸಿದ:

" ಏನು ಯೋಚನೆ ಮಾಡುತ್ತಿದ್ದೀ ಜಸವಂತ ? "

" ಎಲ್ಲರನ್ನು ಕಳೆದುಕೊಂಡವ ಮತ್ತೇನನ್ನು ಯೋಚಿಸಬೇಕು "

" ಹೌದಪ್ಪ........ ಹೊಟ್ಟೆನೋವು ಬಂದವನಿಗೆ ಅದರ ದುಃಖ ಗೊತ್ತಿರುತ್ತೆ. ಬೇರೆಯವನಿಗೆ ಅದರ ನೋವು ತಿಳಿಯಬಹುದೇ ? "

"............" ಜಸವಂತಸಿಂಗ ನಿರುತ್ತರನಾಗಿದ್ದ.

ಮತ್ತೆ ದಯಾಲಸಿಂಗ ಮಾತನಾಡಿಸಿದ: " ನೋಡು ಇಂದು ಅವರು ನಮ್ಮ ಕ್ಯಾಂಪ ನೋಡಲು ಬರುವವರಿದ್ದಾರೆ. ಹೋಗು, ಅಚ್ಚುಕಟ್ಟಾಗಿ ಇರು. ಅಚ್ಚುಕಟ್ಟಾಗಿ ಇರೋದರಿಂದ ಮನುಷ್ಯ ತುಂಬಾ ಚುರುಕಾಗಿ ಕಾಣುತ್ತಾನೆ. ಚುರುಕ ಹುಡುಗ ಸುಂದರನಾಗಿ ಕಾಣುತ್ತಾನೆ. ಕಡೆಗೆ ಇಂಥಾ ಹುಡುಗನನ್ನೇ ಗಂಭೀರಸಿಂಗ ದತ್ತು ತೆಗೆದುಕೊಳ್ಳುತ್ತಾರೆ. ಕಡೆಗೆ ನಮ್ಮ ಜಸವಂತಸಿಂಗ ನಮ್ಮನ್ನು ಗುರುತಿಸುವದಕ್ಕೂ ಬರಲಾರ, ಹ! ಹ!! " ಎಂದು ಉಬ್ಬಿಸುವ ಸ್ವರದಲ್ಲಿ ದಯಾಲಸಿಂಗ ನುಡಿದ.

"ಹ್ಞೂ !" ಜಸವಂತನ ನಿರಾಶಯುಕ್ತ ಹೂಂಕಾರ ದಯಾಲನ ಮಾತಿಗೆ ಉತ್ತರರೂಪವಾಗಿ ದೊರೆಯಿತು. ದಯಾಲ ಮೆಲ್ಲಗೆ ಹೇಳಿದ:

" ನೀನು ತುಂಬಾ ಹುಚ್ಚ ನೋಡು. "

" ನಮ್ಮ ಜನವೆಲ್ಲ ಹುಚ್ಚೇ. "

" ಏನೋ........"

" ನನಗನಿಸಿತು. "

" ನಿಜ. ಹುಚ್ಚನಿಗೆ ಎಲ್ಲರೂ ಹುಚ್ಚಾಗಿಯೇ ಕಾಣುತ್ತಾರೆ. "

" ನಾನು ಹುಚ್ಚನಾಗುವದು ಸಾಧ್ಯವಿಲ್ಲಾ. "

" ಹುಚ್ಚನಲ್ಲದೇ ಮತ್ತೇನು ? "

"ಅಥೇಗೆ?"

"ಮನೆಗೆ ಬರೋ ಮಹಾಲಕ್ಷ್ಮಿನ್ನ ಸ್ವಾಗತ ಮಾಡಲಿಕ್ಕೂ ಬರೋದಿಲ್ಲಾ?"

"ಯಾವ ಮಹಾಲಕ್ಷ್ಮಿ?"

"ರಾತ್ರಿಯಿಂದ ಬೆಳಗಿನವರೆಗೆ ರಾಮಾಯಣ ಕೇಳಿ, ರಾಮ ಸೀತಾಳಿಗೆ ಏನಾಗಬೇಕು ಎಂದು ಕೇಳಿದ ಹಾಗೆ ಪ್ರಶ್ನೆ ಮಾಡುತ್ತೀಯಲ್ಲಪ್ಪಾ."

"ನಿಮ್ಮ ಮಾತಿನ ಅರ್ಥವೇ ನನಗಾಗೋದಿಲ್ಲ."

"ನೀನು ಒಳ್ಳೆ ಚುರುಕಾಗಿ ಕಂಡುಬಿಟ್ಟರೆ ಡಾಯರೆಕ್ಟರರು ನಿನ್ನನ್ನೇ ದತ್ತಕ ತೆಗೆದುಕೊಳ್ಳಲಿಕ್ಕಿಲ್ಲವೇ? ದತ್ತಕ ತೆಗೆದುಕೊಂಡ ಮೇಲೆ, ಈ ಹಾಳು ಜೀವನದಿಂದ ನೀನು ಮುಕ್ತನಾಗುವದಿಲ್ಲವೇ?"

ಈ ಮಾತನ್ನು ಕೇಳಿ ಜಸವಂತಸಿಂಗ ಗಹಿಗಹಿಸಿ ನಕ್ಕುಬಿಟ್ಟ. ಆ ನಗೆಯಲ್ಲಿ ನಿರಾಶೆ ತುಂಬಿ ತುಳುಕುತ್ತಿತ್ತು. ನಗುವಿನ ಕೊನೆಯಲ್ಲಿ ಜಸವಂತಸಿಂಗ ಹೇಳಿದ:

"ನೀವು ನನಗೆ ಹೇಳುವ ಮಾತು ಕೇಳಿ ನನಗೊಬ್ಬರಾದರೂ ಹಿತಚಿಂತಕರು ಸಿಕ್ಕರಲ್ಲವೆಂದು ಆನಂದವಾಯಿತು. ಆದರೆ ಜಗತ್ತಿನಲ್ಲಿ ನಾಲ್ಕು ದಿನ ಬಾಳಬೇಕೆನ್ನುವವರಿಗೆ ಹಿತಚಿಂತಕರ ಅವಶ್ಯಕತೆ. ದಿನಗಳನ್ನು ಎಣಿಕೆ ಹಾಕುತ್ತಿದ್ದವನಿಗೆ ಅದರ ಆವಶ್ಯಕತೆ ಎಲ್ಲಿ?"

ಭರ್ತಿ ಯೌವನದ ವಯಸ್ಸಿನಲ್ಲಿದ್ದ ಜಸವಂತಸಿಂಗನ ಮರಣದ ಮಾತುಗಳನ್ನಾಡುವದನ್ನು ನೋಡಿ ದಯಾಲಸಿಂಗನಿಗೆ ಆಶ್ಚರ್ಯವಾಯಿತು. ಯುವಕರು ಮರಣದ ಮಾತನ್ನಾಡುವದು ಪಾಪವೆಂದೇ ದಯಾಲನ ಅಭಿಪ್ರಾಯವಾಗಿತ್ತು. ಮೇಲಾಗಿ ತಾವು ಶೀಖರಜಾತಿಯಲ್ಲಿ ಹುಟ್ಟಿದ್ದೇವೆ. ಸಿಂಹರಿದ್ದಂಥ ತಾವು ಸುಲಭವಾಗಿ ಸಾಯತಕ್ಕದ್ದಲ್ಲ. ಜಸವಂತನ ಇಂಥ ಮಾತು ಕೇಳಿ, ನಿಜಕ್ಕೂ ದಯಾಲನಿಗೆ ಕರುಣೆಯಾಯಿತು. ನಿರ್ವಾಸಿತ ಕ್ಯಾಂಪಿನಲ್ಲಿ ಬಂದ ಎಲ್ಲರೂ ತಮ್ಮ ದುಃಖಾಂತ ಕತೆಗಳನ್ನು ದಯಾಲನ ಮುಂದೆ ಹೇಳಿದ್ದರು. ಆದರೆ ಜಸವಂತಸಿಂಗ ಯಾವಾಗಲೂ ಬಾಯನ್ನೇ ಬಿಡುತ್ತಿರಲಿಲ್ಲ. ಯಾವಾಗಲೂ ಉದಾಸೀನನಾಗಿಯೇ ಇರುತ್ತಿದ್ದ. ಆತನ ಉದಾಸೀನತೆಯ ಹಿಂದೆ ಯಾವದೋ ದುಃಖವಿರಲೇಬೇಕು ಎಂದು ದಯಾಲ ತಿಳಿದುಕೊಂಡ. ಆದಕೆ

ಆತನ ಹಿಂದಿನ ಕತೆಯನ್ನು ತಿಳಿದುಕೊಳ್ಳುವ ಕುತೂಹಲದಿಂದ ದಯಾಲ ಒತ್ತಾಯ ಪಡಿಸತೊಡಗಿದ.

"ನಿನ್ನ ಈ ಉದಾಸೀನತೆಗೆ ಕಾರಣವೇನು? ನಿನ್ನ ಹಿಂದಿನ ಕತೆಯನ್ನಾದರೂ ಹೇಳು...."

"ಅದು ಕಥೆಯಲ್ಲ. ಅದೊಂದು ನರಕಯಾತನೆ.... ಆದರೆ ಅದೆಲ್ಲ ಈಗೇಕೆ?"

"ಬೇಡ. ಈಗಲೇ ಹೇಳಿಬಿಡು. ನೀನಂತೂ ಮರಣದ ಮಾತನ್ನಾಡುತ್ತಿರುತ್ತಿ. ಯಾವಾಗ ಏನಾಗುವಿ ಎಂಬುದು ನಿನಗೇ ಗೊತ್ತಿಲ್ಲ. ಅದರ ಮೊದಲು ನಿನ್ನ ಕತೆಯನ್ನು ನನ್ನೆದುರು ಹೇಳಿಡು...."

"ನಿಜ. ನನ್ನ ಕತೆ ಯಾರಿಗಾದರೂ ಹೇಳಲೇಬೇಕು........ ನನ್ನ ದುಃಖವಾದರೂ ಕಡಿಮೆಯಾದೀತು."

"ಹೌದು. ಬೇಗ ಹೇಳಿ ಮುಗಿಸು."

ಜಸವಂತಸಿಂಗ ಕತೆ ಹೇಳಲುತೊಡಗಿದ:

"ಗುರುದಾಸಪೂರವೇ ನನ್ನೂರು. ನಾನು ...ನಮ್ಮ ತಾಯಿ....ನನ್ನ ತಂಗಿ... ರೂಪಕೌರ........"

ಜಸವಂತಸಿಂಗನ ತಂದೆ ಗುರುದಾಸಪೂರ ಜಿಲ್ಹೆಯ ಒಂದು ಹಳ್ಳಿಯ ಜಮೀನುದಾರನಾಗಿದ್ದ. ಆದರೆ ಅವನು ಯಾರಿಗೋ, ಸಾಲದಲ್ಲಿ ಜಾಮೀನುದಾರನಾಗಿ ತನ್ನ ಜಮೀನುಗಳನ್ನೆಲ್ಲ ಕಳೆದುಕೊಂಡಿದ್ದ. ಜಮೀನು ಕಳೆದುಕೊಂಡ ನಂತರ ಅವನು ತನ್ನ ಹೆಂಡತಿಯೊಡನೇ ಗುರುದಾಸಪೂರಕ್ಕೆ ಬಂದು ನೆಲಿಸಿದ. ಅಲ್ಲಿಯೇ ಯಾವದೋ ಒಂದು ಅಂಗಡಿಯಲ್ಲಿ ಗುಮಾಸ್ತನಾಗಿ ಕೆಲಸಕ್ಕೆ ನಿಂತುಕೊಂಡ. ಅನಂತರವೇ ಜಸವಂತಸಿಂಗ, ರೂಪಕೌರರು ಹುಟ್ಟಿದ್ದು. ಜಸವಂತಸಿಂಗನಿಗಿಂತಲೂ ರೂಪಕೌರ ೩ ವರುಷ ಚಿಕ್ಕವಳು. ಅವಳು ಒಂದು ವರುಷದವಳಿರುವಾಗಲೇ ತಂದೆ ಕಾಲವಾಗಿದ್ದರು. ಮುಂದೆ ಈ ಮಕ್ಕಳಿಬ್ಬರ ಭಾರ ತಾಯಿಯ ಮೇಲೆ ಬಿತ್ತು. ಆ ಮನೆ ಈ ಮನೆ

ಯಲ್ಲಿ ಬೀಸು, ಅಡಿಗೆ, ದುಡಿತ ಮಾಡಿ ಇಬ್ಬರನ್ನೂ ಬೆಳೆಸಿದಳು. ಬಡತನ ವಿದ್ದರೂ ಮಕ್ಕಳಿಬ್ಬರೂ ಲಕ್ಷಣವಾಗಿ ಬೆಳೆದಿದ್ದರು.

"ರಾಜ್ಯಸಿರಿವಳಿದೊಡೆ ಪೂರ್ವಗುಣಾಂಗಳಿವುವೇ" ಎಂದು ರಾಘವಾಂಕ ಹೇಳಿದ ಹಾಗೆ. ಈ ಕುಟುಂಬಕ್ಕೆ ಈಗ ಬಡತನ ಬಂದಿತ್ತು. ಇಲ್ಲವಾದರೆ ಜಮೀನುದಾರರ ಮನೆಯಲ್ಲಿಯೇ ಬೆಳೆಯುತ್ತಿದ್ದವು ಹುಡುಗರು ರೂಪ ಕೌರಳಂತೂ ಹೆಸರಿಗೆ ತಕ್ಕಹಾಗೇ ಬೆಳೆದಿದ್ದಳು ಸಾವಿರ ಜನ ಹೆಂಗುಸರಲ್ಲಿ ಅವಳನ್ನು ಒಮ್ಮೆಲೆ ಗುರುತಿಸುವದು ಅತಿ ಸುಲಭವಾದ ಮಾತಾಗಿತ್ತು. ಅವಳ ಆ ರಾಶಿ ಕೂದಲು, ಅವಳ ತುಂಬು ಮೈ ಕೈ, ಪ್ರಮಾಣಬದ್ಧ ಸ್ತನ, ಇವೆಲ್ಲ ಅವಳ ಸುಂದರ ಮೈಬಣ್ಣಕ್ಕೆ ಮೆರುಗು ಕೊಟ್ಟಿತ್ತು.

೧೯೪೭ನೇ ಇಸವೀ ಕೊನೆಯಲ್ಲಿ ಪಂಜಾಬದಲ್ಲಿ ಪ್ರಾರಂಭವಾಯಿತು ಕುರುಕ್ಷೇತ್ರದ ಕದನ. ನಿರಪರಾಧಿ ಜೀವಿಗಳೆಷ್ಟೋ ಈ ಬೆಂಕಿಯಲ್ಲಿ ಸುಟ್ಟು ಭಸ್ಮವಾದುವು. ಜಸವಂತ ತನ್ನ ತಾಯಿಯನ್ನೂ ತಂಗಿಯನ್ನೂ ಕರೆದು ಕೊಂಡು ಭಾರತದ ಕಡೆ ನಡೆದ. ಪಾಕಿಸ್ತಾನದ ಗಡಿಯನ್ನು ಬಿಟ್ಟು ಭಾರ ತದ ಗಡಿ ಸೇರುವವರೆಗೂ ಆತನಿಗೆ ನೆಮ್ಮದಿ ಇರಲಿಲ್ಲ

ಫ್ರಂಟಿಯರ ಎಕ್ಸಪ್ರೆಸ್ ಪೇಶಾವರದಿಂದ ಬೊಂಬಾಯಿಗೆ ಹೋಗುವ ಗಾಡಿ. ಈ ಗಾಡಿಯಲ್ಲಿ ಗುರುದಾಸಪೂರದಿಂದ ಕುಳಿತವರೆಂದರೆ ಜಸವಂತ ಸಿಂಗ, ಅವನ ತಾಯಿ, ಅವನ ತಂಗಿ ರೂಪಕೌರ. ಗಾಡಿ ಗುರುದಾಸಪೂರ ಸ್ಟೇಶನ ಬಿಟ್ಟಿತು. ಗಾಡಿಯ ಸಪ್ಪಳದಷ್ಟೇ, ಜಸವಂತನ ಎದೆ ಹೊಡೆದು ಕೊಳ್ಳುತ್ತಿತ್ತು. ಒಂದೊಂದು ಸಲ ತುಂಬಾ ಧೈರ್ಯವನ್ನು ತಂದುಕೊಳ್ಳು ತ್ತಿದ್ದ. ಗಾಡಿಯಲ್ಲಿದ್ದವರ ಸಂರಕ್ಷಣೆಗಾಗಿ ಬಲೂಚ ರೆಜಿಮೆಂಟ ಸುಸಜ್ಜಾಗಿ ಗಾರ್ಡನ ಬದಿ ಡಬ್ಬಿಯಲ್ಲಿ ಕುಳಿತಿತ್ತು.

ಗಾಡಿ ಗುರುದಾಸಪೂರದ ಮುಂದಿರುವ ಮೊದಲನೇ ಹಳ್ಳಿಯ ಸ್ಟೇಶ ನ್ನಿಗೆ ಹಠಾತ್ತಾಗಿ ನಿಂತುಹೋಯಿತು. ಫ್ರಂಟಿಯರ ಎಕ್ಸಪ್ರೆಸ್ ಅಲ್ಲಿ ಮೊದಲೆಂದೂ ನಿಲ್ಲುತ್ತಿರಲಿಲ್ಲ. ಗಾಡಿ ನಿಂತಾಕ್ಷಣ, ಜಸವಂತಸಿಂಗ ಯೋಚ ನೆಯಲ್ಲಿ ಮುಳುಗಿದ. ತಂಗಿ ರೂಪಕೌರ ಗಾಬರಿಯಾಗಿ ಬಿಟ್ಟಳು. ಅವರು ಯೋಚಿಸುತ್ತಿರುವ ಮೊದಲೇ ಎರಡು ಮೂರು ರಾಯಫಲ್ಲಿನ ಸಪ್ಪಳ ಕೇಳಿ ಸಿತು. ಆ ಸಪ್ಪಳದ ಜತೆಯಲ್ಲಿ ಜನತಂಡದ ಜಯುಜಯಕಾರ ಕೇಳಿಸಿತು.

" ಹಸಕೆ ಲಿಯೆ ಪಾಕಿಸ್ತಾನ,
ಲಢಕೆ ಲೇಂಗೆ ಹಿಂದುಸ್ತಾನ '

ಬಲೂಚರೆಜಿಮೆಂಟಿನ ನಾಲ್ಕರಷ್ಟು ಬೆಳೆದಿತ್ತು ಹೊರಗಿನ ಜನಸಮ್ಮರ್ದ ಪ್ರತಿ ಡಬ್ಬಿಯಲ್ಲಿ ಕೆರಳಿದ ಜನಸಮೂಹ ಧಾವಿಸತೊಡಗಿತು. ಜಸವಂತ ಸಿಂಗ, ತಾಯಿ ತಂಗಿಯನ್ನು ಕರೆದುಕೊಂಡು ಹಿಂದಿನ ಬಾಗಿಲಿನಿಂದ ಇಳಿದು ಹೊರಬಿದ್ದ. ದಿಕ್ಕುಗಾಣದವರಂತೆ ಮೂರೂ ಜನ ಹತ್ತಿರವಿದ್ದ ಅಡವಿಯತ್ತ ಧಾವಿಸತೊಡಗಿದರು. ಹತ್ತಿರವೇ ಇದ್ದ ಗ್ರೈಲಿನ ತಾರುಕಂಬಕ್ಕೆ ಎಡವಿ ತಾಯಿ ಬಿದ್ದುಬಿಟ್ಟಳು. ಮುಂದೆ ಓಡುತ್ತಿರುವ ಜಸವಂತನಿಗೆ ಅದು ಬೇಗ ಗೊತ್ತಾಗಲಿಲ್ಲ. ಗೊತ್ತಾದಾಗ ಹಿಂದೆ ಹೊರಳಬೇಕೆನ್ನುವಷ್ಟರಲ್ಲಿ ಜನ ಸಮ್ಮರ್ದ ಓಡುವದನ್ನು ನೋಡಿ ಹಾಗೇ ಮುಂದೆ ಓಡಿದ. ಆದರೆ ಅವನು ಅಡವಿಯಲ್ಲಿ ಬೇರೆ ದಿಕ್ಕನ್ನು ಹಿಡಿದು ಓಡಿದ, ರೂಪಕೌರ ತಂಗಿ ಮತ್ತೊಂದು ದಿಕ್ಕಿಗೆ ಓಡಿದಳು

ಇಬ್ಬರೂ ಅಲ್ಲಿಂದ ಜೀವಸಹಿತ ಪಾರಾದರೆನೋ. ಆದರೆ ಇಬ್ಬರೂ ಬೇರ್ಪಡಿಸಲ್ಪಟ್ಟರು. ತಾಯಿಯ ಗತಿ ಏನೂ ತಿಳಿಯಲಿಲ್ಲ.

" ............ನಾನು ಅಲೆಅಲೆಯುತ್ತ ಈಗ ಈ ನಿರ್ವಾಸಿತರ ಕ್ಯಾಂಪಿಗೆ ಬಂದೆ. ನನ್ನ ತಂಗಿ ರೂಪಕೌರ ಎಲ್ಲಿಯೋ. ನನ್ನ ತಾಯಿಯಂತೂ ಈಗ ಇರುವದು ಸಾಧ್ಯವಿಲ್ಲಾ. ಆದರೆ ಉಳಿದಿರುವ ತಂಗಿಯ ಭೆಟ್ಟಿಯು ಆಗಲಿಲ್ಲ ವಲ್ಲಾ ಎಂದು ಮಿಡುಕುತ್ತಿದ್ದೇನೆ. ಅಯ್ಯೋ........ " ಜಸವಂತಸಿಂಗ ತನ್ನ ಕತೆ ಹೇಳುತ್ತಿರುವಂತೆ ಬಿಕ್ಕಿ ಬಿಕ್ಕಿ ಅಳತೊಡಗಿದ್ದ.

ಅವನ ಹೆಗಲ ಮೇಲೊಂದು ಕೈ ಸಾಂತ್ವನದಿಂದ ಆಡತೊಡಗಿತು. ಮ್ಯಾನೇಜರ ಪಡ್ನಾಲನೂ ಬೆಚ್ಚಿ ಹಿಂದೆ ಹೊರಳಿ ನೋಡಿದ. ಅವನಿಗೂ ಆಶ್ಚರ್ಯವಾಯಿತು.

ರೆಡಿಯೋದ ಸ್ಟೇಶನ ಡಾಯರೆಕ್ಟರ ಗಂಭೀರಸಿಂಗ ತಮ್ಮ ಪತ್ನಿಯೊಂದಿಗೆ ಆಗಲೇ ಬಂದು ಹಿಂದೆ ನಿಂತು ಎಲ್ಲ ಕತೆಯನ್ನು ಕೇಳತೊಡಗಿದ್ದರು.

ಕತೆ ಮುಗಿದಾಕ್ಷಣ ಡಾಯರೆಕ್ಟರ ಗಂಭೀರಸಿಂಗರ ಪತ್ನಿ ಜಸವಂತನ ಹೆಗಲ ಮೇಲೆ ಕೈಯಾಡಿಸಿ ಮೃದುಸ್ವರದಲ್ಲಿ ಸಾಂತ್ವನಗೊಳಿಸತೊಡಗಿದರು. ಹಾಗೆ ಕೈಯಾಡಿಸುತ್ತಿರುವಂತೆ ಅವರ ಕಣ್ಣಂಚಿನಲ್ಲಿ ನೀರು ಕಾಣಿಸಿಕೊಂಡಿತು. ತನ್ನ ಪತಿಯತ್ತ ಹೊರಳಿ--

"ನೋಡಿ. ನನ್ನ ಕಳೆದು ಹೋದ ಮಗ ಸಿಕ್ಕಷ್ಟು ಆನಂದವಾಗಿದೆ ನನಗೆ"

"ನನಗೆ ಅಂತ ಏಕೆ ಹೇಳುತ್ತೀ. ನಮಗೆ ಅಂತ ಹೇಳು"

ಜಸವಂತಸಿಂಗ ಈಗ ನಿರ್ವಾಸಿತರ ಕ್ಯಾಂಪಿನಲ್ಲಿಲ್ಲ. ಅವನನ್ನು ಈಗಾಗಲೇ ಗಂಭೀರಸಿಂಗರು ತಮ್ಮ ಪುತ್ರನನ್ನಾಗಿ ಸ್ವೀಕರಿಸಿ ಬಿಟ್ಟರು. ಗಂಭೀರಸಿಂಗ ಮತ್ತು ಅವರ ಪತ್ನಿ ಇಬ್ಬರೂ ತಮ್ಮ ಗತಿಸಿದ ಮಗನನ್ನು ಮರೆತು ಇವನನ್ನೇ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನೆಂದು ಭಾವಿಸಿ ಇರತೊಡಗಿದರು. ಆ ಮರುವಿನಲ್ಲಿ ಅವರಿಗೆ ಆನಂದ ಲಭಿಸುತ್ತಿದ್ದರೂ ಜಸವಂತಸಿಂಗನ ಉದಾಸೀನ ಮುಖಮುದ್ರೆಯನ್ನು ನೋಡಿ ಮಮ್ಮಲ ಮರಗುತ್ತಿದ್ದರು. ತಂಗಿಗಾಗಿ ಪಡುತ್ತಿದ್ದ ಅವನ ದುಃಖದ ಅರಿವು ಆ ದಂಪತಿಗಳಿಗಿಬ್ಬರಿಗೂ ಆಗುತ್ತಿತ್ತು. ಆದರೆ........?

ಮುಂದೆ ಜಸವಂತನ ವಿದ್ಯಾಭ್ಯಾಸ ಅಡೆತಡೆಯಿಲ್ಲದೆ ಸಾಗುತ್ತಿತ್ತು ಆದರೂ ತಂಗಿ ರೂಪಕೌರಳ ನೆನಹು ಅವನನ್ನು ಒಮ್ಮೊಮ್ಮೆ ತೀರ ಹುಚ್ಚನನ್ನಾಗಿ ಮಾಡಿಬಿಡುತ್ತಿತ್ತು.

ಉತ್ತರ ಹಿಂದುಸ್ಥಾನದಲ್ಲಿ ರಕ್ಷಾಬಂಧನದ ಹಬ್ಬಕ್ಕೆ ವಿಶೇಷ ಮಹತ್ವ. ಆ ಹಬ್ಬವೂ ತನ್ನ ನಿಯಮಿತ ಕಾಲಕ್ಕೇನೇ ಬಂದಿತು. ದೆಹಲಿಯಲ್ಲಿ ಪ್ರತಿ ಮನೆಯಲ್ಲಿ ಹಬ್ಬ ಒಳ್ಳೇ ವಿಜೃಂಭಣೆಯಿಂದ ಸಾಂಗವಾಗತೊಡಗಿತ್ತು. ಮನೆಮನೆಯಲ್ಲಿ ತಂಗಿ ಅಣ್ಣನಿಗೆ ರಕ್ಷಾಬಂಧನ ಕಟ್ಟುತ್ತಿರುವ ದೃಶ್ಯ ನೋಡುತ್ತಿದ್ದ ಜಸವಂತಸಿಂಗನಿಗೆ ದುಃಖ ಉಮ್ಮಳಿಸಿ ಬಂದಿತು. ಆ ದುಃಖದ ಭರದಲ್ಲಿ ಮನೆಗೆ ಬಂದವನೇ ಮೂರ್ಛೆ ಬಂದು ಬಿದ್ದುಬಿಟ್ಟ.

ಗಂಭೀರಸಿಂಗರ ಪತ್ನಿ ಕೂಡಲೇ ಡಾಕ್ಟರರನ್ನು ಕರೆಸಿ ಉಪಚರಿಸಿದಳು. ಜಸವಂತಸಿಂಗನಿಗೆ ಮೈಮೇಲೆ ಪರಿವೆಯೇ ಉಳಿದಿರಲಿಲ್ಲ. ನಡುನಡುವೆಯೇ ಬಡಬಡಿಸುತ್ತಿದ್ದ.

"ರೂಪಕೌರ, ನನ್ನ ನಿನ್ನ ಭೆಟ್ಟಿ ಇನ್ನೆಂದು? ನನಗೆ ನಿನ್ನನ್ನು ಕಾಪಾಡಲಿಕ್ಕಾಗಲಿಲ್ಲ. ನಾನು ಸಾಯುವದೇ ಲೇಸು."

ಅವನು ಬಡಬಡಿಸುವದನ್ನು ಕಂಡು ಗಂಭೀರಸಿಂಗರ ಪತ್ನಿ ಗಾಬರಿ ಯಾಗಿ ಬಿಟ್ಟಳು. ಡಾಕ್ಟರರನ್ನು ಅಂಗಲಾಚಿ ಬೇಡಿಕೊಂಡಳು. ಡಾಕ್ಟರು ಅವನನ್ನು ತಪಾಸಿಸಿ—

"ಮನಸ್ಸಿನ ಮೇಲೊಂದು ದೊಡ್ಡ ಪೆಟ್ಟು ಬಿದ್ದಿದೆ. ಮಾನಸ ಶಾಸ್ತ್ರಜ್ಞ ರಿಂದ ಸಲಹೆಯನ್ನು ಪಡೆದುಕೊಳ್ಳಿರಿ" ಎಂದು ಹೇಳಿ ಹೊರಟುಹೋದರು. ಕೂಡಲೆ ಗಂಭೀರಸಿಂಗರ ಪತ್ನಿ ಮಾನಸ ಶಾಸ್ತ್ರಜ್ಞರನ್ನು ಕರೆಸಿಕೊಂಡರು. ಅವರು ಪರಿಸ್ಥಿತಿಯನ್ನು ಕೂಲಂಕಷವಾಗಿ ನಿರೀಕ್ಷಿಸಿ, ಅವನ ಪ್ರೀತಿಯ ಓಘ ವನ್ನು ಮತ್ತೊಂದು ಬದಿಗೆ ಎಳಿಸಿ, ಮೊದಲಿನ ಪ್ರೀತಿಯನ್ನು ಮರೆಸುವಹಾಗೆ ಮಾಡಬೇಕು ಎಂದು ಅಭಿಪ್ರಾಯ ಪಟ್ಟರು.

ಆ ದಿನ ರಾತ್ರಿ ಗಂಡ ಹೆಂಡರಿಬ್ಬರೂ ಯೋಚಿಸತೊಡಗಿದರು. ಗಂಭೀರ ಸಿಂಗ ತಮ್ಮ ಪತ್ನಿಗೆ ಸೂಚನೆ ಮಾಡಿದರು.

"ನೋಡು, ಬೇಗ ಅವನ ಮದುವೆ ಮಾಡಿ ಬಿಡೋಣ."

"ಅಂದರೆ, ಅವನು ತನ್ನ ತಂಗಿಯನ್ನು ಮರೆಯಬಹುದೇ?"

"ಮರೆಯುವದು ಸಾಧ್ಯವಾಗುತ್ತೆ."

"ಅದ್ಹೇಗೆ?"

"ನೀನು ಈ ಮನೆಗೆ ಬರೋ ಮೊದಲು ನಾನು ನನ್ನ ತಾಯಿಯ ಸಾವಿಗೆ ತುಂಬಾ ಕಳವಳಪಟ್ಟು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಮಾಡಿದ್ದೆ. ಆದರೆ........"

"ಆದರೆ ಮುಂದೇನು?"

"ಆದರೆ ಅಷ್ಟರಲ್ಲಿ ನನ್ನ ಮದುವೆ ಆಯಿತು. ನೀನು ಬಂದೆ. ನಿನಗೆ ನಾನು ಮಾರು ಹೋಗಿಬಿಟ್ಟೆ."

"ಆತ್ಮಹತ್ಯೆಯಿಂದ ನಿಮ್ಮನ್ನು ಉಳಿಸಿದವಳು ನಾನೇನೋ?"

" ನಿಜಕ್ಕೂ. "

ಗಂಭೀರಸಿಂಗರ ಪತ್ನಿ ಆ ಮಾತಿಗೆ ಉಬ್ಬಿ ಹೋಗಿದ್ದರು. ಮತ್ತೆ ಗಂಭೀರಸಿಂಗರೇ ಹೇಳಿದರು:

" ಅವನ ಮದುವೆಯಾಗಿ ಬಿಟ್ಟಿತೆಂದರೆ, ಹೊಸ ಸಂಸಾರದ ಹುರುಪಿನಲ್ಲಿ ತನ್ನ ತಂಗಿಯನ್ನು ಸಾವಧಾನವಾಗಿ ಮರೆಯುತ್ತ ಹೋಗುತ್ತಾನೆ. ಮುಂದೆ ಎಲ್ಲವೂ ಸುರಳೀತವಾಗಿ ಸಾಗುತ್ತದೆ." ಸಂಕಟ ನಿವಾರಣೆಯ ಸೂಚನೆ, ಗಂಭೀರಸಿಂಗರ ಪತ್ನಿಗೆ ಸಮ್ಮತವಾಯಿತು.

ಜಸವಂತಸಿಂಗನ ಮದುವೆ ಮಾತಿಗೆ ಪ್ರಾರಂಭವಾಗುತ್ತಿರುವ ಮೊದಲೇ ಗಂಭೀರಸಿಂಗರಿಗೆ ದಿಲ್ಲಿಯಿಂದ ನಾಗಪೂರಕ್ಕೆ ವರ್ಗವಾಯಿತು. ನಾಗಪೂರಕ್ಕೆ ಬಂದ ಒಂದೆರಡು ತಿಂಗಳಲ್ಲಿಯೇ ಗಂಭೀರಸಿಂಗರು ಜಸವಂತಸಿಂಗನ ಮದುವೆ ಮಾಡಲು ಪ್ರಯತ್ನಿಸತೊಡಗಿದರು. ಒಂದು ದಿನ ಮಧ್ಯಾನ್ಹ ಊಟವಾದ ನಂತರ ಗಂಡಹೆಂಡರಿಬ್ಬರೂ ಮದುವೆಯ ಬಗ್ಗೆ ಮಾತನಾಡುತ್ತಿರುವಾಗಲೇ ಜಸವಂತನೂ ಒಳಗೆ ಬಂದು ನಿಂತ.

ಗಂಭೀರಸಿಂಗರು ಅವನನ್ನು ಹತ್ತಿರ ಕರೆದು— " ಮಗೂ, ನೀನಿನ್ನು ದೊಡ್ಡವನಾದೆ. ನಿನ್ನ ಮದುವೆ ಈಗಲೇ ಮಾಡುವದು ಒಳಿತು. "

" ........... " ಜಸವಂತಸಿಂಗ ನಿರುತ್ತರನಾದ. ಅವನ ಮೌನವನ್ನು ಗಂಭೀರಸಿಂಹರು ಸಮ್ಮತಿಯ ಸೂಚನೆಯೆಂದು ಅರ್ಥ ಮಾಡಿಕೊಂಡು ಮುಂದೆ ಹೇಳಿದರು: " ಹೆಣ್ಣು, ನೋಡೋಣವೇ ? "

" ಹೆಣ್ಣು " ಗಾಬರಿಗೊಂಡ ಸ್ವರದಲ್ಲಿ ಜಸವಂತಸಿಂಗ ಮುಂದೆ ಹೇಳತೊಡಗಿದ:

" ಹೆಣ್ಣು ಗೊತ್ತುಪಡಿಸುವದಕ್ಕೆ ಪರವಾ ಇಲ್ಲ. ಆದರೆ ನನ್ನದೊಂದು ವಿಜ್ಞಾಪನೆ ಕೇಳಿಕೊಳ್ಳುವಿರಾ ? "

" ಅಗತ್ಯವಾಗಿ ಮಗೂ. "

" ನೀವು ನನ್ನನ್ನು ದತ್ತ ತೆಗೆದುಕೊಂಡಿರಿ. ಬೀದಿಯಲ್ಲಿ ಬಿದ್ದವನನ್ನು

ಮೇಲಕ್ಕೆತ್ತಿ ಹಿಡಿದಿರಿ. ಅದರಂತೆ ನಾನೂ ಒಬ್ಬ ಬೀದಿಯಲ್ಲಿ ಬಿದ್ದವಳನ್ನೇ ಮೇಲಕ್ಕೆತ್ತಿ ಹಿಡಿಯಬೇಕೆಂದು ಆಸೆ. "

ಜಸವಂತಸಿಂಗನ ಮಾತಿನ ಅರ್ಥ ದಂಪತಿಗಳಿಬ್ಬರಿಗೂ ಆಗಲಿಲ್ಲ. ಗಂಭೀರಸಿಂಗರೇ ಮತ್ತೆ ಕೇಳಿದರು:

" ಬಿಡಿಸಿ ಹೇಳು ಮಗೂ. "

" ಬೀದಿಯಲ್ಲಿ ಬಿದ್ದವಳೆಂದರೆ, ತಪ್ಪು ಅರ್ಥ ಮಾಡಿಕೊಳ್ಳಬೇಡಿ. ನನ್ನ ಹಾಗೆ ಮನೆ ಮಾರು ತಪ್ಪಿಸಿಕೊಂಡು ನಿರ್ವಾಸಿತಳಾದಂಥ ಹುಡುಗಿಯನ್ನೇ ನೋಡಿ ನನ್ನ ಮದುವೆ ಮಾಡಿ ಎಂದಿಷ್ಟೇ ಅರ್ಥ. "

ದಂಪತಿಗಳಿಬ್ಬರೂ ಅವನ ಮಾತನ್ನು ಕೇಳಿ, ಅವನಿಗೆ ತಮ್ಮ ಸಮ್ಮತಿಯನ್ನು ಸೂಚಿಸಿದರು. ಜಸವಂತನ ಮನ ನೋಯಿಸದ ಹಾಗೇ ನಡೆದುಕೊಳ್ಳುವದೆಂದು ಅವರು ನಿರ್ಧರಿಸಿದ್ದರು. ಮಾರನೇ ದಿನವೇ ಗಂಭೀರಸಿಂಗರು ನಿರ್ವಾಸಿತ ಕ್ಯಾಂಪಿನಲ್ಲಿ ಕನ್ಯಾನ್ವೇಷಣೆಗಾಗಿ ಜಬ್ಬಲ್ಪೂರಕ್ಕೆ ನಡೆದರು. ಶೀಖರಲ್ಲಿ ಲಗ್ನವಾಗುವವರೆಗೂ ಗಂಡು ಹೆಣ್ಣನ್ನು ನೋಡುವಂತಿರುವದಿಲ್ಲ. ಅದಕ್ಕಾಗಿ ಜಸವಂತಸಿಂಗ ಗಂಭೀರಸಿಂಗರ ಜತೆಯಲ್ಲಿ ಹೋಗದೇ ನಾಗಪೂರದಲ್ಲಿಯೇ ಉಳಿದುಕೊಂಡ.

ಗಂಭೀರಸಿಂಗರ ಮನೆಯಲ್ಲಿ ಮಂಗಲವಾದ್ಯಗಳು ಮೊಳಗತೊಡಗಿದ್ದವು. ಜಸವಂತಸಿಂಗನ ಮದುವೆಗೆ ಒಂದು ವಿಶೇಷ ಮಹತ್ವ ಬಂದಿತ್ತು. ಇಷ್ಟು ದೊಡ್ಡ ಮನೆತನಸ್ಥನಾಗಿದ್ದರೂ ಒಬ್ಬ ನಿರ್ವಾಸಿತ ಹುಡಿಗೆಯ ಜತೆಯಲ್ಲಿ ಅವನು ಮದುವೆಗೆ ಒಪ್ಪಿದ್ದೇ ಒಂದು ವಿಶೇಷ ಕಾರಣ. ಮದುವೆಗೆ ಬಂದ ಮಹನೀಯರೆಲ್ಲರೂ " ಇದೊಂದು ಉದ್ಧಾರದ ಕಾರ್ಯ " ವೆಂದು ಕೊಂಡಾಡಿದರು. ಮದುವೆ ಮನೆಯಲ್ಲಿ ಎಲ್ಲರೂ ಆನಂದಭರಿತರಾಗಿದ್ದರು. ಗಂಭೀರಸಿಂಗರ ಪತ್ನಿ ಯಾವಾಗಲೂ ಜಸವಂತನ ಬಳಿಯಲ್ಲಿಯೇ ನಿಂತು ಆತನನ್ನು ನೋಡಿಕೊಳ್ಳುತ್ತಿದ್ದರು. ಇಷ್ಟೆಲ್ಲವಿದ್ದರೂ ಜಸವಂತಸಿಂಗನ ಕಣ್ಣುಗಳಲ್ಲಿ ನೀರು ಧಾರೆಯಾಗಿ ಹರಿಯತೊಡಗಿತ್ತು. ಅದನ್ನು ನೋಡಿದ ಗಂಭೀರಸಿಂಗರ ಪತ್ನಿ ಮಗನಿಗೆ " ಮಗೂ, ಇಂದು ಶುಭ ದಿನ. ಹೀಗೆ ಅಮಂಗಲವಾಗಿ

ಕಣ್ಣೀರನ್ನು ತೆಗೆಯಬಾರದು."

ಜಸವಂತಸಿಂಗನಿಗೆ ದುಃಖ ಒಮ್ಮೆಲೇ ಉಕ್ಕಿ ಬಂತು. ದುಃಖಿತ ನಾಗಿಯೇ ಹೇಳಿದ: "ಕೊನೆಗೂ ನನ್ನ ತಂಗಿ ನನಗೆ ಪತ್ತೆಯಾಗಲಿಲ್ಲ. ಅವ ಳಿದ್ದಿದ್ದರೆ ತನ್ನ ಅಣ್ಣನ ಲಗ್ನದಲ್ಲಿ ಎಷ್ಟು ಕುಣಿಯುತ್ತಿದ್ದಳೋ, ಎಷ್ಟು ಆನಂದ ಪಡುತ್ತಿದ್ದಳೋ, ನನ್ನ ತಂಗಿ ರೂಪಕೌರ— ತುಂಬಾ........... " ಜಸವಂತ ಸಿಂಗನ ಕಂಠ ಗದ್ಗದಿಸಿತು. ತಾಯಿ ಸಂತೈಸತೊಡಗಿದಳು.

ಅಷ್ಟರಲ್ಲಿಯೇ ಲಗ್ನದ ಮಂಟಪದಿಂದ ಕರೆ ಬಂದಿತು. ಗಂಭೀರ ಸಿಂಗರು ಕೂಗಿ ಹೇಳಿದರು: "ಮುಹೂರ್ತ ಮಿಕ್ಕುವದರಲ್ಲಿದೆ. ಬೇಗ ಬನ್ನಿ" ತಾಯಿ ಜಸವಂತನನ್ನು ಲಗ್ನಮಂಟಪಕ್ಕೆ ಕರೆತಂದಳು ಮನೆಯ ಮುಂದೆ ಹಾಕಿದ ಭವ್ಯ ಹಂದರದಲ್ಲಿ ೫೦೦ ಕ್ಕಿ ಮೇಲ್ಪಟ್ಟು ಜನ ನೆರೆದಿದ್ದರು. ಡಾಯ ರೆಕ್ಟರರ ಮಗನ ಮದುವೆ ಎಂದಮೇಲೆ ಕೇಳುವದೇನಿದೆ.

ಜಸವಂತಸಿಂಗ ಒಂದುಸಲ ಆ ಜನಸಮ್ಮರ್ದದತ್ತ ದಿಟ್ಟಿಸಿ ನೋಡಿದ. ಆವನ ವ್ಯಾಕುಲಚಿತ್ತ ತಂಗಿ ಅಲ್ಲಿ ಎಲ್ಲಾದರೂ ಇರಬಹುದೇ ಎಂದು ಹುಚ್ಚು ಭರವಸೆ ಅವನಿಗೆ ಹುಟ್ಟಿಸಿತ್ತು. ದಂಗೆಯಲ್ಲಿ ಅಡವಿಪಾಲಾದ ನಾನು ಈ ವರೆಗೆ ಬರಬೇಕಾದರೆ ಸಾಕಾದಾಗ, ತಂಗಿ, ಅವಳೊಂದು ಹೆಣ್ಣು ಚಿಗರೆ ಯಾರ ಕೈಗೆ ಬಿದ್ದಿತೋ ಎಂದು ತನ್ನ ಮನಸ್ಸಿನ ಹುಚ್ಚುತನವನ್ನು ಸುಧಾರಿಸಿಕೊಂಡು ಮಂಟಪದತ್ತ ನಡೆದ.

ಮಂಟಪದಲ್ಲಿ ಹುಡುಗಿಯೂ ಬಂದಳು. ಜಬ್ಬಲಪೂರ ನಿರ್ವಾಸಿತರ ಕ್ಯಾಂಪಿನ ಮ್ಯಾನೇಜರನೇ ಅವಳಿಗೆ ತಂದೆಯಾಗಿ ಬಂದಿದ್ದ.

ಇಬ್ಬರ ನಡುವೆ ಅಂತರಪಟ ಹಿಡಿದು ಗುರು ಮಂತ್ರೋಚ್ಚಾರಣೆ ಮಾಡತೊಡಗಿದ. ಮಂತ್ರ ಮುಗಿದಾಕ್ಷಣ ಅಂತರಪಟ ಬದಿಗೆ ಸರಿಯಿತು. ವಧು ಜಸವಂತಸಿಂಗನ ಕೊರಳಲ್ಲಿ ಹಾರ ಹಾಕಲು ಕತ್ತನ್ನು ಮೇಲಕ್ಕೆತ್ತಿ ದಳು. ಜಸವಂತ ಅವಳನ್ನು ನೋಡಿದಾಕ್ಷಣ ಕೈಯಲ್ಲಿಯ ಮಾಲೆಯನ್ನು ಕಿತ್ತೆಸೆದು ಅವಳನ್ನು ಅಪ್ಪಿಕೊಂಡು "ನನ್ನ ತಂಗಿ ರೂಪಕೌರ, ರೂಪಕೌರ" ಎಂದು ಕೂಗುತ್ತ ಹುಚ್ಚಿದ್ದವರಂತೆ ಕೂಗಾಡತೊಡಗಿದ

ತುಂಬಿದ ಜನವೆಲ್ಲ ಆಶ್ಚರ್ಯದಿಂದ ಸ್ತಬ್ಧರಾದರು. ಒಮ್ಮೆಲೆ ಶಾಂತಿ ನೆಲಸಿತು.

ರೂಪಕೌರ ಅಣ್ಣನನ್ನು ಅಪ್ಪಿ ಅಳುತ್ತ "ನನ್ನ ಅಣ್ಣ ಸಿಕ್ಕ." ಎಂದಳು.

ಇಬ್ಬರ ಕಣ್ಣುಗಳಲ್ಲಿ ಆನಂದಬಾಷ್ಪಗಳು ಕೋಡಿಯಾಗಿ ಹರಿಯತೊಡಗಿತು. ಗಂಭೀರಸಿಂಗರ ಪತ್ನಿ ರೂಪಕೌರಳ ಬೆನ್ನಮೇಲೆ ಕೈಯಾಡಿಸುತ್ತ "ನೀನು ಸೊಸೆಯಾಗಿ ಈ ಮನೆಯಲ್ಲಿ ಬರಹೊರಟಿದ್ದೆ. ಆದರೆ ಈಗ ಮಗಳಾಗಿ ಬಾ." ಎಂದು ಹೇಳಿ ಅವಳನ್ನು ಅಪ್ಪಿಕೊಂಡಳು.

ಬಳಿಯಲ್ಲಿಯೇ ಲಗ್ನದ ಪವಿತ್ರ ಅಗ್ನಿ ಕುಂಡ ಉರಿಯುತ್ತಿತ್ತು. ಆದರ ಹೊಗೆಗೆ ಇಬ್ಬರ ಕಣ್ಣಲ್ಲಿ ನೀರು ಸುರಿಯಹತ್ತಿದವು.

ಇಬ್ಬರೂ ಹೊಗೆಯಿಂದ ಹೊರಗೆ ಬಂದರು. ಅವರ ಜೀವನದಲ್ಲಿಯ ಹೊಗೆ ಮಾಯವಾಗಿತು.

---

# ಸಾಲ ಪರಿಹಾರ.



"ಸಾಸಮೀ ?"

"ಯಾರದು ?"

"ನಾನು ಬುದ್ಧಿ, ಸೋಮು."

"ಓ, ಹೋ. ಸೋಮನೋ ?" ರಾಮರಾಯರು ಹುಬ್ಬುಗಂಟಿಕ್ಕಿಕೊಂಡೇ ಹೊರಬಂದರು. ಸೋಮು ಅವರನ್ನು ನೋಡಿ ಬಗ್ಗಿ ವಿನಯದಿಂದ ನಮಸ್ಕರಿಸಿ "ಏನೋ ಸುದ್ದೀ ಕೇಳಿದೆ, ತಮ್ಮ ತಾಂವಾ ಓಡಿ ಬಂದೆ."

"ಹೌದಪ್ಪಾ. ಮೂಗು ಮುಚ್ಚಿದರೇ ತಾನೇ ಬಾಯಿ ತೆರೆಯೋದು"

"ಇಷ್ಟು ದಿನಾ ತಡದಿದ್ದೀರಿ ಬುದ್ದಿ. ಇದೊಂದು ವರ್ಸ ತಡೆಯಾಕೆ ಆಗದೇ ಬುದ್ದೀ. ಈಸಲದ ಅಡಿಕೆ ಫಸಲು ಕೈಗೆ ಹತ್ತಿದಾಕ್ಷಣಾ, ತಮ್ಮ ರಕಮು ಬಡ್ಡಿ ಸಮೇತ ತಿರುಗುಸ್ತೀನೆ. ಬುದ್ಧಿ, ತಮ್ಮ ಕಾಲ ಬೀಳ್ತೀನೆ." ಸೋಮನ ದೈನ್ಯದ ಕೂಗಿಗೆ ರಾಮರಾಯರ ಹೃದಯ ಕರಗಲಿಲ್ಲ. ರಾಮರಾಯರ ಹೃದಯ ಹಿಮಾಲಯದಂತೆ ಅಚಲ ಎಂದು ಊರಿಗೇ ಗೊತ್ತಿತ್ತು. ರಾಮರಾಯರ ಕಾಲಿಗೆ ಬಿದ್ದ ಆ ಸೋಮು ಕಣ್ಣೀರ ಕೋಡಿಯನ್ನೇ ಹರಿಸಿದ್ದ. ಆ ಕಣ್ಣೀರಿಗೆ ರಾಮರಾಯರ ಕಾಲಿನ ಹೊರಚರ್ಮ ಒದ್ದೆಯಾಗಿತ್ತೇಹೊರತು ಒಳಹೃದಯ ತೊಯ್ದಿರಲಿಲ್ಲ. ತಿರಸ್ಕೃತ ನಗುವಿನೊಂದಿಗೆ ರಾಮರಾಯರು ಹೇಳಿದರು:

"ನನ್ನ ಕಾಲಿಗೇಕೋ ಬೀಳೋದು, ದೇವರ ಕಾಲಿಗಾದರೂ ಬೀಳ್ಹೋಗು."

"ನನ್ನ ಪಾಲಿಗೆ ನೀವೇ ದೇವ್ರು."

“ಸಾಲ ಕೊಡುವಾಗಷ್ಟೇ ನಾನು ದೇವರು. ತಿರುಗಿ ಕೇಳುವಾಗ ನಾನು ಭಸ್ಮಾಸುರ.”

ಆಗಿನ ಅವರ ವಿಕಟಹಾಸ್ಯ ಅವರನ್ನು ಭಸ್ಮಾಸುರನನ್ನೇ ಹೋಲಿಸುತ್ತಿತ್ತು. ಆದರೂ ಅಂತಹ ರಕ್ಕಸನ ಕೈಕೆಳಗೆ ತಲೆಕೊಟ್ಟ ಹುಲ್ಲುಮಾನವನಿಗೆ ಮರಣಪರ್ಯಂತವೂ ಬದುಕಿನ ಆಸೆ ಬಿಟ್ಟಿದ್ದಲ್ಲಾ. ಸೋಮ ಇನ್ನೂ ಪ್ರಾರ್ಥಿಸುತ್ತಲೇ ಇದ್ದ.

“ಈ ಸಲ ನನ್ನ ಮಗಳು ಚಿನ್ನೀ ಮದ್ವೇ ಮಾಡಬೇಕು ಅಂತಾ ನಿರ್ಧಾರ ಮಾಡಿದ್ದೇನೆ ಸ್ವಾಮಿ. ಚಿನ್ನಿ ತಮ್ಮದೇ ಮಗಳು ಅಂತಾ........”

“ಅಂತಾ ಸಾಲಾ ಸೂಟ ಬಿಡಲ್ಯಾ?”

“ಹಾಗೆ ಹೇಳಲಿಲ್ಲಾ ಬುದ್ಧೀ. ಇನ್ನೊಂದು ವರ್ಷ ತಡದ ಬಿಟ್ಟರೆ, ಖಂಡಿತ ತಮ್ಮದು ಅಸಲು ಬಡ್ಡಿ ಒಂದೇ ದಿನ ತಂದು ಒಪ್ಪಿಸ್ತೇನೆ.”

“ಒಂದು ವರ್ಷ ತಡೆದರೆ, ಮುಂದಿನ ಸಲ ಮಗಳ ಬಾಣಂತಿತನ ಅನ್ನುತ್ತಿ. ಲೋ ಸೋಮ, ಇದು ತೀರದ ವ್ಯವಹಾರ. ಸಾಲಗಾರ ಅತ್ತರೆ ಸಾವುಕಾರನ ಬಟ್ಟೆ ತೊಯ್ಯೋದಿಲ್ಲಾ. ಈ ವಾರದೊಳಗಾಗಿ ರಕಮು ಬಡ್ಡೀ ಸಹಿತ ನನ್ನ ತಿಜೋರಿ ಸೇರಬೇಕು.”

“ಕೈಯಲ್ಲಿ ಕಾಸೇ ಇಲ್ಲದಾಗ ಕೊಡೋದು ಹೇಗೆ ಸಾಮೀ?” ಸೋಮನ ಧ್ವನಿಯಲ್ಲಿ ಕೊಂಚ ಮಾರ್ಪಾಟವಾಗಿತ್ತು. ದೈನ್ಯದ ಸುಳಿವನ್ನು ಕಾಠಿಣ್ಯ ವ್ಯಾಪಿಸಬಯಸುತ್ತಿತ್ತು.

ರಾಮರಾಯರು ಅಷ್ಟೇ ನಿಷ್ಠುರತೆಯಿಂದ ಉತ್ತರಿಸಿದರು.

“ಅದಕ್ಕೇ ನಿನ್ನ ಚನ್ನಪಟ್ಟಣ ಗಲ್ಲಿಯೊಳಗಿನ ಮನೆಯನ್ನು ಜಪ್ತಿಗೆ ತಂದದ್ದು. ಕಾಸಿಲ್ಲದಾಗ ಕಾಸು ಹೇಗೆ ಹುಟ್ಟುತ್ತೆ ನೋಡ್ತೇನೆ.”

ರಾಮರಾಯರ ಮಾತುಗಳಿಂದ ಸೋಮ ನಡುಗಿ ಹೋದ. ಅವನ ಯೋಚನೆಯ ಕಡಲೊಳಗೆ ಮದಗಜ ಹೊಕ್ಕು ಸರೋವರದ ಸ್ತಬ್ಧ ನೀರನ್ನು ಕದಡಿಸಿತ್ತು. ಚಿನ್ನಿಯ ಭವಿತವ್ಯ ಬೇರೆ ಅವನೆದುರು ಕುಣಿದಾಡ ತೊಡಗಿತು. ಸೋಮನ ಬುದ್ಧಿ ಮಂಕಾಯಿತು. ಮೈತುಂಬ ಬೆವರು ಹನಿ ಮೂಡಿತು. ಅದೇ ಸಮಯಕ್ಕೆ ವೇಣಕ್ಕ ಗಂಡನ ಎಲೆ ತಟ್ಟೆಯಲ್ಲಿ ಬದಾಮು ಹಾಕಲು ಒಳಮನೆಯಿಂದ ಹಜಾರಿಗೆ ಬಂದರು. ಸೋಮ ಬೆವತ

ದ್ದನ್ನು ಕಂಡು "ಏನೋ ಸೋಮು, ಚಳಿಗಾಲದಲ್ಲಿಯೂ ಬೆಂವತಿದ್ದೀ ಯಲ್ಲೋ" ಎಂದರು.

"ಹೊರಗೆ ಚಳಿ ಇದ್ದರೂ ಒಳಗೆ ಸಾಲದ ಶಕೆ ಕುದಿಯುತ್ತಿದೆ ಯಮ್ಮಾ." ಎಂದುಹೇಳಿ ಮತ್ತೊಮ್ಮೆ ಬಗ್ಗಿ ನಮಸ್ಕರಿಸಿ ಭಾರವಾದ ಹೊರೆ ಯನ್ನು ಹೊತ್ತವನಂತೆ ಹೊರಟು ಹೋದ. ಸೋಮನ ಮಾತು ಕೇಳಿದ ವೇಣಕ್ಕನಿಗೆ ಏಕೋ ಹೃದಯ ಹಿಂಡಿದಂತಾಯ್ತು. ಕೊಂಕು ಮಾತುಗಳನ್ನ ರಿಯದ ಅವಳು ಸಹಜ ನಗೆಯಾಡುವದಕ್ಕೆ ಹಾಗೆ ಹೇಳಿದ್ದಳು. ಆ ನಗೆ ಮಾತು ಹೊಗೆಯ ನಾಂದಿಯಾಗುವದೆಂದು ಅವಳು ತಿಳಿದಿರಲಿಲ್ಲ. ಅರೆಕ್ಷಣ ವೇಣಕ್ಕ ಮೈಮರೆತು ನಿಂತಳು. ಗಂಡನ ಎಲೆ ಅಡಿಕೆ ತಟ್ಟೆಯಲ್ಲಿ ಬದಾಮು ಹಾಕುವದನ್ನು ಮರೆತು ಸೋಮು ಹೋದತ್ತ ನೋಡುತ್ತ ನಿಂತಳು ರಾಮು ರಾಯರು ಮಾತ್ರ ಗಹಗಹಿಸಿ ನಕ್ಕರು. ಗಾಯದ ಮೇಲೆ ಉಪ್ಪು ನೀರ್ರ ಚಿಮುಕಿಸಿದಂತಾಗಿ ವೇಣಕ್ಕ—

"ಹೀಗೆ ನಗೋದಕ್ಕೇನಾಯ್ತು ?"

"ಇರಲಿ, ಬದಾಮು ಇಡು ಇಲ್ಲಿ. ಗಾಳಕ್ಕೆ ಮೀನ ಈಗ ತಾನೇ ಸಿಲುಕಿದೆ."

ವೇಣಕ್ಕ ಅಲ್ಲಿ ನಿಲ್ಲಲಿಲ್ಲ. ಅಡಿಕೆ ತಟ್ಟೆಯಲ್ಲಿ ಬದಾಮು ಚೆಲ್ಲಿ ನೇರಾಗಿ ಒಳನಡೆದರು. ದೇವರ ಕೋಣೆಗೆ ಹೋಗಿ ಮನಸೋಕ್ತ ಕಂಬನಿಗರೆಯಬೇ ಕೆಂದು ದೇವರ ಕೋಣೆಯತ್ತ ನಡೆದರು. ದೇವರ ಕೋಣೆಯ ಬಾಗಿಲು ಹಾಕಿತ್ತು. ಇನ್ನು ದೂಡುವವರಿದ್ದರು. ಆದರೆ ಒಳಗಣ ಧ್ವನಿ ಅವರನ್ನು ನಿಂತಲ್ಲಿಯೇ ನಿಲ್ಲಿಸಿತು.

"ದೇವರೇ, ಅವಳಿಗೆ ಮಕ್ಕಳಾಗಲಿಲ್ಲ ಅಂತ ರಾಯರು ನನ್ನ ಲಗ್ನ ವಾಗಿದ್ದಾರೆ. ಆದರೆ ಈಗ ಈ ತಿಂಗಳು ಅವಳು ಮುಟ್ಟೇ ಕೂಡಲಿಲ್ಲ. ತಿಂಗಳ ಮೇಲೆ ೩-೪ ದಿನಗಳಾಗಿ ಹೋಯಿತಲ್ಲ. ಅವಳ ಮದುವೆಯಾಗಿ ೧೧ ವರುಷವಾಗಿ ಹೋಯಿತು ಈ ಹನ್ನೊಂದು ವರುಷ ಸಂತಾನವಿಲ್ಲದಂತೆ ಮುಂದೂ ಸಂತಾನ ಕೊಡಬೇಡ. ಈ ನನ್ನ ಕೋರಿಕೆ ಫಲಿಸಿದರೆ ಈ ಸಲ ಮಾರೆಮ್ಮನ ಜಾತ್ರೆಯಲ್ಲಿ ನಿನ್ನ ಹೆಸರಿನ ೨ ಕುರಿ........"

ಹೊರಗೆ ನಿಂತಿದ್ದ ವೇಣಕ್ಕ ಕಿವಿಯ ಮೇಲೆ ಕೈಯಿಕ್ಕಿದಳು. ಅಲ್ಲಿಯೂ ಅವಳಿಗೆ ನಿಲ್ಲಲಾಗಲಿಲ್ಲ. ಮಾನವ ಜೀವಿಗಳ ಸಂಕುಚಿತ ಸ್ವಭಾವ ಅವರ ಮಾನಸಿಕ ಶಾಂತಿಯನ್ನು ಕೆಡಿಸಿತ್ತು. ವೇಣಕ್ಕ ನೇರಾಗಿ ತಮ್ಮ ಮಲಗುವ ಕೋಣೆಯ ಒಳಸೇರಿದರು. ಮಂಚದ ಮೇಲೆ ಮಲಗಿಯೇ ಮನಸೋಕ್ತ ಅತ್ತುಬಿಡಬೇಕೆಂದು ಹವಣಿಕೆಯಲ್ಲಿದ್ದರು. ಆದರೆ ಸಾಧ್ಯವಾಗಲಿಲ್ಲ ತಂಬಿಗೆ ಹುಡುಕಿ ತಂದು ಮೂಲೆಯಲ್ಲಿ ಕುಳಿತರು.

ಸ್ವಲ್ಪ ಸಮಯದಲ್ಲೇ ದೇವರ ಕೋಣೆಯ ಬಾಗಿಲ ತೆಗೆದ ಸಪ್ಪಳ ವಾಯಿತು. ವೇಣಕ್ಕನ ಸವತಿ ಭಾಗೀರತಿ ಹೊರಬಂದಳು. ಬಂದವಳೇ ನೇರಾಗಿ ಪಡಸಾಲೆಯತ್ತ ಹೊರಟವಳು ಮೂಲೆಯಲ್ಲಿ ಕುಳಿತ ವೇಣಕ್ಕನನ್ನೂ ಮಗ್ಗುಲಲ್ಲಿ ಡಬ್ಬ ಬಿದ್ದ ತಂಬಿಗೆಯನ್ನೂ ನೋಡಿ ಹಿಗ್ಗಿ ಹೀರೆಕಾಯಿಯಾದಳು. ಔಪಚಾರದ ಎರಡು ಶಬ್ದ ಮಾತಾಡದೇ ಹೋದರೆ, ಸಭ್ಯತನಕ್ಕೆ ಸಲ್ಲದ್ದು ಎಂದು ತಿಳಿದು ಭಾಗೀರಥಿ "ಅಯ್ಯೋ ಅಕ್ಕಾ, ಇವತ್ತೇ ಕೂತು ಬಿಟ್ರಾ ? ಇನ್ನೂ ಪೂರ್ಣ ಒಂದು ತಿಂಗಳಾಗಲಿಲ್ಲವಲ್ಲಾ ?"

"ತಿಂಗಳ ಏಕಾಗಲಿಲ್ಲವಮ್ಮ. ತಿಂಗಳ ಮೇಲೆ ನಾಲ್ಕು ದಿನಗಳಾಗಿ ಹೋಯಿತಲ್ಲವಮ್ಮಾ."

ದಿನಗಳ ಎಣಿಕೆ ಹಾಕಿದ ಭಾವ ಮುಖದ ಮೇಲೆ ತೋರಿಸುತ್ತ ಭಾಗೀರಥಿ—

"ಹೌದಲ್ಲರಿ. ತಿಂಗಳು ಮುಗಿದು ಹೋಗಿದೆ. ನನಗನಿಸಿತ್ತು, ಹಾಗಾದರೆ ಈ ಸಲ ಮುಟ್ಟು ನಿಂತೇ ಹೋಯಿತು. ತಾಯಿ ಆಗ್ತೀರಿ ಅಂತ ತಿಳಿದಿದ್ದೆ."

ಭಾಗೀರಥಿಯ ಮುಂಗಾಲುಪುಟಿಗೆಯ ಮಾತು ವೇಣಕ್ಕನನ್ನು ಕೆರಳಿಸಿತು—

"ನನ್ನ ಮುಟ್ಟು ಮುದಿಕೆಯಾದಾಗೇ ನಿಲ್ಲೋದು" ಅರ್ಧ ಸಿಟ್ಟು ಅರ್ಧ ನಿರಾಶೆಯ ಉಸಿರಿನಿಂದಲೇ ವೇಣಕ್ಕ ಉತ್ತರಿಸಿದಳು.

"ಇರಲಿ ಬಿಡಿ. ಅಕ್ಕ ಯಾವಾಗಲೂ ನಿಮ್ಮದು ಇದೇ ಮಾತು. ಈಗೇನು ನಿಮಗೆ ಮಹಾ ವಯಸ್ಸು ಆಗಿರೋದು. ಇನ್ನೂ ಮಕ್ಕಳಾಗೂ ವಯಸ್ಸು ಮೀರಿಲ್ಲಾ."

“ ಮುಖ್ಯ ಮಾರೆಮ್ಮನ ಕೃಪೆ ಬೇಕಲ್ಲಮ್ಮ ? ”

ಮಾರೆಮ್ಮನಿಗೆ ನೀವು ಹರಿಕೆ ಹೊರಬೇಕು. ”

“ಮನೆಯಲ್ಲಿ ಮಾರೆಮ್ಮನಿಗೆ ಕುರಿ ಕೋಳಿ ಹರಿಕೆ ಹೊರೋವರು ಇರತಾ ನಮ್ಮದೇನು ಮಹಾ ಹರಿಕೆ, ಫಲ ಪುಷ್ಪದ್ದು. ”

ಈ ಮಾತು ಕೇಳಿ ಭಾಗೀರತಿಯ ಎದೆ ನಡುಗಿತು. ಮಾತನ್ನು ಮುಗಿಸುವದಕ್ಕಿಂತಲೂ ಮುಖವನ್ನೇ ಮರೆ ಮಾಡಬೇಕೆನ್ನಿಸಿತು ಅವಳಿಗೆ. ಮಾತಿನ ಮುಖ್ಯ ವಿಷಯ ಬದಲಿಸಿ ಭಾಗೀರತಿ “ ಅಯ್ಯೋ, ಅವರು ಕೋಣೆಗೆ ಹೋಗಿ ಬಿಟ್ಟಿದ್ದಾರೆ. ಅವರಿಗೆ ಹಾಸಿಗೆ ಹಾಸಿ ಕೊಡೋದಿತ್ತಲ್ಲಾ ” ಎನ್ನುತ್ತಲೇ ಭಾಗೀರತಿ ರಾಮರಾಯರ ಕೋಣೆ ಸೇರಿದಳು.

ಕೆಲ ನಿಮಿಷದಲ್ಲಿಯೇ ಬಾಗಿಲ ಒಳಚಿಲಕ ಹಾಕಿದ ಸಪ್ಪಳ ವೇಣಕ್ಕನಿಗೆ ಕೇಳಿಸಿತು. ಒಂದು ದೀರ್ಘ ಉಸಿರು ಬಿಟ್ಟು ಮೂಲೆಯಲ್ಲಿಯೇ ವೇಣಕ್ಕ ಅಡ್ಡಾದರು.

ರಾಮರಾಯರು ಸಿರಿವಂತ ತಂದೆ ತಾಯಿಯ ಹೊಟ್ಟೆಯಲ್ಲಿ ಜನಿಸಿರಲಿಲ್ಲ. ಅವರ ಕುಶಾಗ್ರ ಬುದ್ಧಿ ಅವರ ವೈಯಿಂದ ಬೆವರು ಇಳಿಸದೇ ಭಾಗ್ಯಶ್ರೀಯನ್ನು ಒಲಿಸಿಕೊಂಡಿತ್ತು. ಶಿರ್ಶಿಯ ಹತ್ತಿರದ ಒಂದು ಸಣ್ಣ ಹಳ್ಳಿಯಲ್ಲಿಯ ಶಾನುಭೋಗಿಕೆಯೇ ಅವರ ಆನುವಂಶಿಕ ಆಸ್ತಿ. ಆ ಆಸ್ತಿಯನ್ನು ದ್ವಿಗುಣಿಸಿ ವರ್ಗೀಕರಿಸಿದ ಶ್ರೇಯವೆಲ್ಲ ರಾಮರಾಯರದು. ಅವರ ಕೈಮೇಲಿನ ಧನದ ಗೆರೆಯೇ ಹಾಗಿತ್ತೇನೋ ? ಶಾಲೆಯಲ್ಲಿ ಸಂಪಾದಿಸಿದ ವಿದ್ಯೆ ಅಷ್ಟಕ್ಕಷ್ಟೆಯಾಗಿದ್ದರೂ ಕೈಚಳಕದ ಬುದ್ಧಿ ಅಪಾರವಾಗಿತ್ತು.

ಈ ರೀತಿಯಾಗಿ ಬೆಳೆಯುತ್ತಿರುವ ಅವರ ಸಂಪತ್ತು ಅವರ ಮೂಲದ ಮನಸ್ಸಿನಲ್ಲಿ ಮಾರ್ಪಾಟು ಮಾಡುತ್ತಿತ್ತು. ಚಿಸಿವಾಲ ತನ್ನ ತಂಗಿಯ ಚಿನ್ನವನ್ನೂ ಕದಿಯುವದರಲ್ಲಿ ಹಿಂದೆ ಮುಂದೆ ನೋಡಲಾರ. ಎಂಬ ನಾಣ್ಣುಡಿ ಇದ್ದಂತೆ, ಬರುವ ರೊಕ್ಕದಲ್ಲಿ, ಇವರು ತನ್ನವರು, ಇವರು ಬಳಗದವರು, ಎಂಬ ಭೇದ ಭಾವವನ್ನು ರಾಮರಾಯರು ಇಡುತ್ತಿರಲಿಲ್ಲ. ಈ ಒಂದು

ವಿಷಯದಲ್ಲಿ ರಾಮರಾಯರು ನಿಷ್ಪಕ್ಷಪಾತಿಗಳೆಂದೇ ಹೇಳಬಹುದು. ಅವರ ಮೊದಲ ಲಗ್ನದ ವೇಳೆಗೆ ಒಂದು ಪ್ರಸಂಗ ನಡೆಯಿತಂತೆ ಲಗ್ನದ ಮಾತು ಕತೆಯಾಡುವಾಗ ವರದಕ್ಷಿಣೆಯ ರಕಂ ೫೦೦ ಎಂದು ನಿಶ್ಚಯವಾಗಿತ್ತಂತೆ. ಆದರೆ ಸರಿಯಾಗಿ ಲಗ್ನದ ವೇಳೆಗೇನೇ ಆ ಬಡಪಾಯಿ ತಂದೆಗೆ ೫೦೦ ರೂ. ಕೂಡಿಸಿ ಕೊಡುವದಕ್ಕಾಗಲಿಲ್ಲವಂತೆ. ಅಲ್ಲಿ ಇಲ್ಲಿ ಕಾಡಿ ಬೇಡಿದರೂ, ರಕಂ ೪೦೦ ನ್ನು ದಾಟಲಿಲ್ಲ ಲಗ್ನವೇ ಮುರಿಯುವ ಪ್ರಸಂಗ ಬಂದಿತ್ತು. ಆದರೆ ರಾಮರಾಯರು ಬಡ್ಡಿ ದರ ಹಾಕಿ ಮಾವನ ಕಡೆಯಿಂದ ಪ್ರಾಮೇಶ್ವರೀ ನೋಟನ್ನು ಬರೆಸಿಕೊಂಡು ಲಗ್ನ ಮುರಿಯದ ಹಾಗೆ ನೋಡಿಕೊಂಡರು. ಮೊದಲೇ ಹಿಂಡಿ ಹಿಪ್ಪಿಯಾದ ಮಾವನಿಗೆ ಈ ಸಾಲ ತಿರುಗಿಸಲಿಕ್ಕಾಗಲಿಲ್ಲ. ಬಡ್ಡಿ ಅಸಲು ಕೂಡಿ ೮೦೦ ಆದಾಕ್ಷಣ, ರಾಮರಾಯರು ಮಾವನಮನೆಯನ್ನೆ ಗಿಟ್ಟಿಸಿ ಬಿಟ್ಟರು. ಮನೆ ಜಪ್ತಿಯಾದ ಸುದ್ದಿ ಕೇಳಿ ಅವರ ಮಾವ ಮರುಗಿ ಗೋಳಾಡಿ ಹಳ್ಳಿ ಸೇರಿದ.

ಆದರೂ ರಾಮರಾಯರ ನಿಷ್ಪಕ್ಷಪಾತ ಹೃದಯ ಅಳುಕಲಿಲ್ಲ ಮಾವ ಹೊಟ್ಟೆಬಟ್ಟೆಗಾಗಿ ತಿರುಗಾಡಿ ತೊಳಲಾಡುತ್ತಿದ್ದುದನ್ನು ಊರಜನರೇ ನೋಡು ತ್ತಿದ್ದರು. ರಾಮರಾಯರ ಉಳಿದ ಸಾಲಗಾರರು ಈ ದೃಶ್ಯ ನೋಡಿ ಅರೆ ಜೀವಿಗಳಾಗಿ ಬಿಟ್ಟಿದ್ದರು.

ಸೋಮು ರಾಯರ ಮನೆ ಬಿಟ್ಟು ಹೊರಬಂದದನೇನೋ ನಿಜ. ಆದರೆ ಹೋಗುವದೆಲ್ಲಿ ತಿಳಿಯಲಿಲ್ಲ. ಅವನ ಮನಸ್ಸೇ ಸ್ಥಿರದಲ್ಲಿರಲಿಲ್ಲ. ಕಾಲು ಎಳೆದತ್ತ ಹೊರಟಿದ್ದ. ಮನಸ್ಸಿನಲ್ಲಿ ನೂರಾಎಂಟು ಯೋಚನೆಗಳು. ಒಳಗೆ ಮನಸ್ಸಿನ ದ್ವಂದ್ವ ನಡೆದೇ ಇತ್ತು. ಒಂದು ಮನಸ್ಸು ಹೇಳುತ್ತಿತ್ತು "ನೋಡು. ಪ್ರಾಮಾಣಿಕತನದಿಂದ ದುಡಿದುದರ ಫಲವಿದು. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವುದು ಲೇಸು. ಇಂದು ರಾತ್ರಿಯೇ ರಾಯರನ್ನು ಮುಗಿಸು." ಇನ್ನೊಂದು ಮನಸ್ಸು ಅವಿರೋಧವಾಗಿ ಹೇಳುತ್ತಿತ್ತು.

"ತನ್ನ ಮೈಮೇಲೆ ಕಾಲು ಕೆಡಹಿದರೆಂದು ಕಡಿದು ಸೇಡು ತೀರಿಸಿಕೊಳ್ಳುವದು ಮುಳ್ಳಿನ ಧರ್ಮ. ಅದರೆ ಹೂವಿನದಲ್ಲ. ನೀನು ಮುಳ್ಳಿನಷ್ಟು ಕೀಳನಲ್ಲ. ಪ್ರಾಮಾಣಿಕತನಕ್ಕೆ ಇಂದಿಲ್ಲದಿದ್ದರೂ ನಾಳೆಯಾದರೂ ಸುಖ ಸಿಕ್ಕೀತಷ್ಟೇ? ಬಿತ್ತಿದ ಬೆಳೆಯು ಗಾಳಿ ಮಳೆ ಬಿಸಿಲುಗಳ ಹೊಡೆತ ಸಹಿಸಬೇಕು. ತದನಂತರವೇ ಅದು ಫಲಿಸುತ್ತೆ."

ಮೊದಲನೇದು ಮತ್ತೆ "ಹುಚ್ಚು ಹೋರಾಟ. ನೀನಂತೂ ಈಗ ಹಾಳಾಗುವದು ಖಂಡಿತ. ರಾಯರ ಮಾತನ್ನು ಜ್ಞಾಪಿಸಿಕೋ. ನಿನ್ನ ಚನ್ನಪಟ್ಟಣಗಲ್ಲಿಯೊಳಗಿನ ಮನೆ— ಹ, ಹ, ಹ. ನೀನು ಹಾಳಾಗುವ ಮೊದಲೇ ನಿನ್ನ ಹಾಳು ಮಾಡಿದವರ ಕತೆಯನ್ನು ಮುಗಿಸು." ಸೋಮು ಒಮ್ಮೆಲೆ ತಲೆಯನ್ನು ಮೇಲೆತ್ತಿದ. ಅದು ಅವನ ದಾನವೀ ತಪಸ್ಸಿನ ಧ್ವಜವಾಗಿತ್ತು. ಈಗಾಗಲೇ ಊರ ಹೊರಗಿನ ಹೊಲಿಗೇರಿಯ ಹತ್ತಿರ ಬಂದು ಬಿಟ್ಟಿದ್ದ.

ಮಾದರ ಗಿಡ್ಡ ಬದಿಯಿಂದಲೇ ಹೊಲಸು ಲಾವಣಿ ತೊದಲಿಸುತ್ತ ನಡೆದಿದ್ದ. ಗಿಡ್ಡನ ಮೈಮೇಲೆ ಎಚ್ಚರವೇ ಇರಲಿಲ್ಲ. ಸೋಮು ಚಿಟಿಕೆ ಬಾರಿಸಿದ. ಅವನು ವಿಚಾರಿಸುತ್ತಲೇ ಕೂಗಿದ.

"ಓಯ್ ಗಿಡ್ಡ."

ಗಿಡ್ಡ ಅರೆಎಚ್ಚರದಲ್ಲಿಯೇ ಹೊರಳಿದ. ಮಾತು ಹೊರಡುವ ಮೊದಲೇ ತಲೆಯನ್ನು ಹೊರಳಾಡಿಸಿದ

"ಏಯ್, ಗಡಂಗ ಎಲ್ಲೈತೋ?"

"ಇಲ್ಲಿಲ್ರಿ. ನೀಲೆಕಣಿಗೆ ಹೋಗಬೇಕು"

"ನಡೆ, ಬರ್ತೀಯಾ?"

"ಬ್ಯಾಡ್ರಿ. ನಂಗೆ ಮನೆಗೆ ಹೋಗ್ಬೇಕು."

"ಬಾರೋ, ನಿಂಗೂ ಎರಡು ಬಾಟ್ಲೆ ಕೊಡಸ್ತೇನೆ."

ಮನೆ ಕಡೆ ಹೊರಳಿದ ಗಿಡ್ಡನ ಮುಖ ನಿಲೇಕಣಿಯತ್ತ ಹೊರಳಿತು. ಸೋಮನ ಮುಖದ ಮೇಲಿನ ಚಿಂತೆಯ ಕಳೆ ಕಾಣಿಸದಾಗಿತ್ತು. ಹಾದಿಯಲ್ಲಿ ಇಬ್ಬರೂ ಕೂಡಿಯೇ ನಡೆದಿದ್ದರೂ ಯಾರೂ ಮಾತಾಡುತ್ತಿರಲಿಲ್ಲ. ಗಿಡ್ಡನ

ಮೈಮೇಲೆ ಅರ್ಧ ಪರಿವೆಯೇ ಇರಲಿಲ್ಲ. ಮೇಲಾಗಿ ಮತ್ತೊಂದು ಬಾಟ್ಲಿಯ ಸುಖಸ್ವಪ್ನದಲ್ಲಿ ತಲ್ಲೀನನಾಗಿದ್ದ. ಇದರಿಂದ ಅವನ ಬಾಯಿಂದ ಮಾತು ಹೊರಡುವದಾದರೂ ಹೇಗೆ ?

ಸೋಮನ ಮಾತೇ ಬೇರೆಯಾಗಿತ್ತು. ತನ್ನ ನಿರ್ಧಾರದ ವಿಚಾರ ವನ್ನೇ ಅವನು ಎಣಿಸುತ್ತಿದ್ದ. ಬಂದ ಸಂಕಟವನ್ನು ಮರೆಯುವದಕ್ಕಷ್ಟೇ ಸೆರೆ ಕುಡಿಯುವ ವಿಚಾರವನ್ನು ಮಾಡಿರಲಿಲ್ಲ. ಅದಕ್ಕೂ ಮುಂದಿನ ಮೆಟ್ಟಲನ್ನು ಏರಿದ್ದ. ಭರ್ತಿಯಾಗಿ ಸುರಾಪಾನ ಮಾಡಿ, ಸರಿರಾತ್ರಿಗೆ ರಾಯರ ಪೂಜೆಯನ್ನು ಮುಗಿಸಬೇಕು ಎಂದು ಚಪಗೊಡಲಿಯನ್ನು ಆದಷ್ಟು ಸೆರೆ ಕುಡಿದನಂತರ ಮಸೆದಿಡಬೇಕು; ಎಂದು ಮನಸ್ಸಿನಲ್ಲಿ ವಿಚಾರಗಳನ್ನು ಮಸೆಯತೊಡಗಿದ್ದ. ಹಾದಿಯುದ್ದಕ್ಕೂ ಮತ್ತೆ ವಿಚಾರಗಳ ಗೊಂದಲವೇ. ತಾನು ಊರಲ್ಲಿ ಸಭ್ಯನೆಂದು ಪರಿಗಣಿಸಲ್ಪಟ್ಟಿದ್ದೇನೆ. ತಿಳಿಯುವ ವಯಸ್ಸಿ ನಿಂದ ಇಂದಿನವರೆಗೆ ರಾಯರ ಮನೆಯಲ್ಲಿ ಪ್ರಾಮಾಣಿಕತನದಿಂದ ದುಡಿದಿ ದ್ದೇನೆ. ಹೀಗಿದ್ದು ಇಂದು ಇಂಥ ಕಾರ್ಯಕ್ಕೆ ಕೈಹಾಕಬೇಕೇ ? ಇಂಥ ಕೆಲಸ ಮಾಡಿ ತನ್ನ ಶೀಲಯಾದ ಪೂರ್ವ ಚಾರಿತ್ರ್ಯಕ್ಕೆ ರಾಡಿಯನ್ನೆಸೆದುಕೊಳ್ಳ ಬೇಕೆ, ಛೇ? ಇಲ್ಲ. ಆದರೆ ಸೇಡಿಗೆ ಸೇಡು ಬೇಕು. ನಾನು ಪ್ರಾಮಾ ಣಿಕನಾಗಿ ದುಡಿದಿದ್ದೇನೆ. ಅಷ್ಟೇ ಅಲ್ಲ ರಾಯರನ್ನು ಒಂದು ಸಲ ಉಳಿ ಸಿಯೂ ಇದ್ದೇನೆ. ಆವಾಗ—ಆ ವಕೀಲರ ಸೊಸೆ ಮನೆಗೆ ಬಂದಾಗ, ರಾಯರ ಆ ಹೊರಚಾಳಿಯು—ಥೂ, ಆ ಪ್ರಸಂಗದಲ್ಲಿಯೂ ನಾನು ಅವರ ಮಾನ ಹೋಗುವ ಪ್ರಸಂಗದಿಂದ ಅವರನ್ನು ಉಳಿಸಿದ್ದೇನೆ. ಇಷ್ಟೆಲ್ಲ ಇದ್ದೂ, ನನ್ನನ್ನು ಅವರು ಈಗ ಈ ಪರಿಸ್ಥಿತಿಗೆ ಇಳಿಸಬೇಕಂದ್ರೆ ? ಇಲ್ಲಿ, ಕೈಕೊಂಡ ಕೆಲಸದಲ್ಲಿ ಹಿಂಜರಿಯತಕ್ಕದ್ದಲ್ಲ. ಗಲ್ಲಿಗೆ ಹೋಗಬೇಕಾದೀತು ಅಷ್ಟೇನೇ ?

"ನೀಲಕಣಿ ಬಂತ್ರಿಯಪ್ಪಾ ?"

ಗಿಡ್ಡನ ಮಾತಿನಿಂದ ಸೋಮ ಎಚ್ಚರಗೊಂಡ. "ನಡೆ. ಊರಹೊರ ಗಿಂದನೇ ಗಡಂಗಕ್ಕೆ ಹೋಗೋಣ." ಎಂದು ಗಿಡ್ಡನನ್ನು ಜತೆಯಲ್ಲಿ ಕರೆದು ಕೊಂಡು ಸೋಮ ಮುಂದೆ ನಡೆದ. ಕತ್ತಲು ಕವಿದಿತ್ತು. ಅಮಾವಾಸ್ಯೆಯ ದಿನ. ಮನೆಮನೆಯಲ್ಲಿಯೂ ದೀಪದ ಬೆಳಕು ನಕ್ಷತ್ರಗಳಂತೆ ಮಿನುಗುತ್ತಿತ್ತು. ಗಡಂಗವು ಸನಿಯದಲ್ಲಿಯೇ ಇತ್ತು. ಗಡಂಗದಲ್ಲಿಯ ಗದ್ದಲ ಕರಗಿತ್ತು.

ಗಡಂಗದ ಯಜಮಾನ ಮಿಣುಕು ದೀಪದ ಬೆಳಕಿನಲ್ಲಿ ದುಡ್ಡನ್ನೆಣಿಸುತ್ತಿದ್ದ. ಸೋಮು ಒಳಗ್ಹೋದವನೇ ಅತ್ತಿತ್ತ ನೋಡಿದ. ಕಳ್ಳತನದಿಂದ ಒಳನುಗ್ಗಿ, ಬೆಕ್ಕಿನಂತೆ ಕಣ್ಣುಮುಚ್ಚಿ ಹಾಲು ಕುಡಿಯಬಹುದೇ? ತನ್ನನ್ಯಾರಾದರೂ ನೋಡಿಯಾರಲ್ಲ ಎಂಬ ಭಯ ಬೇರೆ. ಆದರೆ ಗಿಡ್ಡ ನೇರವಾಗಿ ಗುತ್ತಿಗೆದಾರನ ಹತ್ತಿರ ಹೋಗಿ ತಾನೇ ದುಡ್ಡನ್ನು ಕೊಡುವವರ ಹಾಗೆ "ಎರಡು ಬಾಟ್ಲಿ ಭಟ್ರೇ" ಎಂದು ಕೂಗಿದ.

"ಭಟ್ರೇ" ಎಂಬ ಶಬ್ದಕ್ಕೇ ಸೋಮು ಬೆರಗಾಗಿ ಹೊರಳಿನೋಡಿ ಸಜಕ್ಕೂ ಸ್ತಂಭಿತನಾಗಿಯೇ ಬಿಟ್ಟ. ಎದೆ ಧಸ್ಸೆಂದಿತು. ಗಡಂಗದ ಮಾಲಿಕ ಮತ್ಯಾರೂ ಆಗಿರಲಿಲ್ಲ. ರಾಯರ ಮಾವ. ಲಗ್ನದ ವರದಕ್ಷಿಣೆಗಾಗಿ ಆಸ್ತಿಪಾಸ್ತಿ ಕಳೆದುಕೊಂಡ ಮಾವ. ಹಣವಿಲ್ಲದವನ ಬಾಳು ಹೆಣದಕಿಂತ ಕಡೆ. ಮಾನವಿಲ್ಲದವನು ಮೃತಸಮಾನ ಮೊದಲೇ ಹೆಣವಾಗಿದ್ದ ಭಟ್ರು ಈ ಉದ್ಯೋಗಕ್ಕೆ ಕೈಹಾಕಿದರೇನೋ? ಸೋಮನ ಮನಸ್ಸಿನಲ್ಲಿ ಸೇಡು ಬೃಹದ್ ಆಕಾರ ತಾಳತೊಡಗಿತ್ತು. ಸ್ವಂತ ಮಾವನನ್ನೇ ಈ ಪರಿಸ್ಥಿತಿಗೆ ತಂದಿರಿಸಿದ ರಾಯರು ತನ್ನನ್ನೂ........"

"ಬನ್ರಿ ಸ್ವಾಮಿ" ಗಿಡ್ಡ ಮೊದಲು ಬಾಟ್ಲಿ ಖಾಲಿ ಮಾಡಿ ಜೋಲಿ ಕೊಡೆಯುತ್ತ ಕೂಗಿದ. ಸೋಮು ಹತ್ತಿರ ಸರಿದು ಗಿಡ್ಡನತ್ತ ಲಕ್ಷ ಕೊಡದೆ ಭಟ್ಟರಿಗೆ "ಶರಣ್ರಿ ಭಟ್ಟರೆ" ಎಂದ.

"ಯ್ಯಾರು ಸೋಮಣ್ಣಾ ಏನು" ಎಂದು ಸಾಮೋಪಚಾರದ ನಗು ನಕ್ಕರು ಭಟ್ಟರು. ಆ ನಗು ಸೋಮನಿಗೆ ಕರ್ಕಶ ನಗುವಾಗಿ ತೋರಿತು. ಸೋಮನೇ ಪ್ರಶ್ನಿಸಿದ:

"ತಾವು ಈ ಕೆಲಸಕ್ಕೆ ಕೈಹಾಕಬೇಕೇ?"

"................" ಭಟ್ಟರ ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯ ಹತ್ತಿತು.

"ನಾಲ್ಕು ಮನೆ ಭಿಕ್ಷೆಗೆ ಹೋಗಿದ್ದರೆ ಹೊಟ್ಟೆ ತುಂಬ್ತಿತ್ತಲ್ಲ?"

"ನಾನೊಬ್ಬನೇ ಇದ್ದಿದ್ದರೆ ಆ ಭಿಕ್ಷೆ ಚಿಂತೇನೇ ಇರತಿರಲಿಲ್ಲ. ಅಂದೇ ಭಾಂವೀ ಬೀಳತಿದ್ದೆ."

ಸೋಮನಿಗೆ ತನ್ನ ಚಿನ್ನಿಯ ನೆನಪಾಯ್ತು. ಭಟ್ಟರು ಬದುಕಿದ್ದು ತಮ್ಮ ಮಕ್ಕಳ ಸಲುವಾಗಿ. ಈಗ ತಾನು ಏನೋ ಮಾಡಹೊರಟಿರುವೆ.

"ಹಾಗಾದರೆ ಈ ಕೆಲಸ ಮಾಡಬೇಕೇ?"

"ಯಾವದೇನಯ್ಯ ವೃತ್ತಿ? ಎರಡು ಕಾಸು ಕೈಯಲ್ಲಿ ಆಡುತ್ತಿರುವವನಿಗೆ ಮಾನ! ಜನ ದುಡ್ಡನ್ನು ಕೂಡಿಸುವ ರೀತಿಯನ್ನು ನೋಡುವದಿಲ್ಲ. ಕೂಡಿದ ದುಡ್ಡಿನ ರಾಸಿಯತ್ತ ನೋಡಿ, ಮನುಷ್ಯನ ಬೆಲೆಯನ್ನು ಕಟ್ಟುತ್ತಾರೆ."

ಸೋಮನ ವಿಚಾರಚಕ್ರ ತಿರುಗತೊಡಗಿತು. ರೀತಿಗೂ ನೀತಿಗೂ ಯಾವದೇ ಸಂಬಂಧವಿಲ್ಲ ಬದುಕಬೇಕಾದರೆ ವೃತ್ತಿ ಯಾವದಾದರೇನು? ನಾಲ್ಕು ಜನ ಮೊದಲು ಮೂರು ದಿನ ಮೂಗು ಮುರಿಯುತ್ತಾರೆ. ಮುಂದೆ ಎಲ್ಲವೂ ಸಮ

"ಯಪ್ಪಾ, ಹೊತ್ತಾಯ್ತು ಬುದ್ಧೀ, ಬೇಗ ಮುಗಿಸ್ರಿ" ಗಿಡ್ಡ ಜೋಲಿ ಹೊಡೆಯುತ್ತಲೇ ನುಡಿದ.

"ನಾನು ಆಗಲೇ ಮುಗಿಸಿ ಬಿಟ್ಟೆ" ಸೋಮ ಉತ್ತರಿಸಿದ.

"ಮತ್ತೆ ತುಂಬಿದ್ದು ಹಾಗೇ ಐತಲ್ರಿ"

"ಅಯ್ಯೋ, ಸೀ ಹೆಚ್ಚಾಗಿ ಕುಡಿದಿದ್ದೆ ಮಬ್ಬೇ. ಅದು ಖಾಲಿ ಬಾಟ್ಲಿ" ಎಂದು ಹೇಳಿ ಸೋಮ ಬಾಟ್ಲಿಯನ್ನು ಮರಳಿ ತೆಗೆದುಕೊಳ್ಳುವದಕ್ಕೆ ಭಟ್ಟರಿಗೆ ಹೇಳಿದ. ಸೆರೆಯಂಗಡಿ ತೆಗೆದ ಭಟ್ಟರನ್ನು ನೋಡಿದ ಸೋಮನ ಮೊದಲ ಸಿದ್ಧಾಂತರ ಕಳಚಿಬಿಟ್ಟಿತ್ತು. ಅದರ ಬದಲು ಬೇರೊಂದು ಆಶೆಯ ಮಹಾ ಮಂದಿರ ನಿರ್ಮಾಣವಾಗಿತ್ತು.

"ಬರ್ತೇನೆ ಭಟ್ಟರೇ" ಎಂದು ಸೋಮ ಗಿಡ್ಡನ ಜತೆಯಲ್ಲಿ ಗಡಂಗದಿಂದ ಹೊರಬಿದ್ದ.

ಸೋಮ ಮನೆಗೆ ಬಂದ. ಆಕಾಶ ದಾಳಿ ಮುಗಿಯಿತೆಂದರೆ, ನೆಲಮನೆಯಿಂದ ಹೊರಗೆ ಬಂದ ಸೈನಿಕನಂತೆ ಹಾಯಾಗಿ ಉಸುರಿಸಿದ. ಆ ಉಸಿರನ್ನು ಕೇಳಿ ಚಿನ್ನಿ ಒಳಗಿನಿಂದಲೇ ಹೊರಬಂದಳು. ಅಪ್ಪನನ್ನು ಒಂದುಸಲ ದೃಷ್ಟಿಸಿ

ದಳು. ಹೊಸಗಾಳಿ ಬೀಸಿದಾಗ ಕಲಿತ ಕಾರ್ಮೋಡಗಳು ಚಲವಿಚಲವಾಗಿದ್ದಂತೆ ಸೋಮನ ಮುಖ ನಿಚ್ಚಳವಾಗಿತ್ತು. ಅವನ ಮುಖದ ಮೇಲಿನ ಚರ್ಯೆಯನ್ನು ನೋಡಿ ಹೋದ ಕೆಲಸ "ಗಂಡು" ಎಂದು ಚಿನ್ನಿ ಮನದಲ್ಲಿಯೇ ನಿರ್ಧರಿಸಿದಳು. ಆದರೂ ಮನಸ್ಸಿಗೆ ಸಂದೇಹವನ್ನು ನಿವಾರಿಸಿಕೊಳ್ಳುವದಕ್ಕೆ—

"ಅಪ್ಪಾ ಹೋದ ಕೆಲಸs ಗಂಡೇ ?"

"ಎರಡೂ ಅಲ್ಲ."

ಚಿನ್ನಿ ಬೆಚ್ಚಿದಳು. ಅವನ ನಗುಮುಖ ನೋಡಿದರೆ ಸಂಕಟ ಮುಕ್ತತೆಯ ಸುಚಿನ್ಹ ಕಾಣುತ್ತಿತ್ತು. ಹಾಗಾದರೆ? ಅಪ್ಪ ತನ್ನ ಜತೆಯಲ್ಲಿ ಸುಳ್ಳಾಡುತ್ತಿರಬಹುದೇ ? ಛೀ, ಹಿರೀ ಮೀನು ಕಿರಿ ಮೀನನ್ನು ನುಂಗುತ್ತಿರಬಹುದು. ನಾಯಿ ನಾಯಿಯನ್ನು ನೋಡಿ ಬೊಗಳಬಹುದು. ಆದರೆ ತನ್ನ ತಂದೆ—ತಾಯಿಯ ಸುಖವನ್ನೇ ಅರಿಯದ ತನಗೆ ಸೋಮನೇ ತಾಯಿಯಾಗಿದ್ದ. ತಾಯಿ ಮಗಳಿಗೆ ಎರಡು ಬಗೆಯಬಹುದೇ ?—ಅತಿ ವಿರಳ. ಆ ವಿರಳರಲ್ಲಿ ತನ್ನ ತಂದೆ ಕೂಡಲಾರ. ಮಗಳ ವಿಚಾರ, ಪ್ರಶ್ನಾರ್ಥಕ ಮುದ್ರೆ ನೋಡಿ ಸೋಮನೇ—

"ಅನ್ನ ಬೇಯಿಸಿದ್ದೀಯಾ ?"

"ಇಲ್ಲ, ರಾಗೀ ಹಿಟ್ಟಿನ ಮುದ್ದೆ ತಿರಿವೀನಿ."

ಸೋಮ ಒಂದು ಸಲ ನಕ್ಕ. ಆ ನಗು ಶುಷ್ಕವಾಗಿತ್ತು. ಆ ನಗುವಿನ ಹಿಂದೆ ನೋವಿತ್ತು. ಹೆಣದ ಮೇಲೆ ಹೊದ್ದ ಶುಭ್ರ ವಸ್ತ್ರವಿರುತ್ತದಲ್ಲಾ.

"ಅಪ್ಪಾs ಯಾಕೆ ನಕ್ಕೆ ?"

"ಮತ್ತೇನು ಅಳಬೇಕೇ ?"

"..........?" ಚಿನ್ನಿ ನಿರುತ್ತರಳಾದಳು.

"ಅಳು ಹೆಚ್ಚಾಯ್ತುಂದ್ರೆ ನಗೂ ಬರ್ತದೆ ಕಣೆ ?"

ಚಿನ್ನಿಗೆ ತಡೆಯಲಾಗಲಿಲ್ಲ. ಕಣ್ಣೀರು ಕೋಡಿಯಾಗಿ ಹರಿಯಿತು. ಸೋಮ ಚಿನ್ನಿಯನ್ನು ತಬ್ಬಿದ. ಆದರೆ ಅವನ ಕಣ್ಣಲ್ಲಿ ನೀರೇ ಬರಲಿಲ್ಲ. ಮತ್ತೆ ಅದೇ ತರಹದ ನಗು—ಎಷ್ಟು ಭೀಷಣವಾಗಿತ್ತು ಆ ನಗು.

ಆ ನಗು ನಾಳಿನ ಅಳುವಿಗೆ ನಾಂದಿಯಾಗುವಂತಿದ್ದರೆ—

ತಂದೆ ಮಗಳು ಕೂಡಿ ರಾಗಿ ಮುದ್ದೆಯನ್ನೆ ಊಟಮಾಡಿ ತಮ್ಮತಮ್ಮ ಹಾಸಿಗೆಯ ಮೇಲೆ ಒರಗಿದರು. ನಡುಮನೆಯಲ್ಲಿ ಹರಳೆಣ್ಣೆಯ ದೀಪ ಸಣ್ಣಾಗಿ ಮಿಣುಗುತ್ತಿತ್ತು. ತನ್ನ ಮನೆಯ ಪರಿಸ್ಥಿತಿಯನ್ನು ಆ ಮಿಣುಕು ಅಣಕವಾಡಿಸುವಂತೆ ಸೋಮನಿಗೆ ಗೋಚರಿಸಿತು. ಸೂರ್ಯ ಮುಳುಗಿದಾಗ ತನ್ನ ಜೀವನದಲ್ಲಿಯ ಮತ್ತೊಂದು ದಿನ ಪಾರಾಯಿತು ಎಂದು ಸಂತೋಷ ಪಟ್ಟ ಸೋಮನಿಗೆ ಈ ದೀಪದ ಬೆಳಕೂ ಸಹಿಸಲಸಾಧ್ಯವಾಯಿತು. ಎದ್ದು ದೀಪವನ್ನಾರಿಸಿದ. ಚಿನ್ನಿಗೆ ಕಂಡಿದ್ದು ಆ ಬತ್ತಿಯು ಹೊಗೆ ಮಾತ್ರ.

ಕೋಳಿ ಕೂಗಿದಾಕ್ಷಣ, ಚಿನ್ನಿ ಎದ್ದು ಅಡಿಗೆ ಮನೆಯ ಕೆಲಸಕ್ಕೆ ತೊಡ ಗಿದ್ದಳು. ಭಾಂಡಿಗಳನ್ನೆಲ್ಲ ತಿಕ್ಕಿ, ಮನೆ ಮುಂದಿನ ಅಂಗಳವನ್ನೆಲ್ಲ ಕಸಗುಡಿಸಿ ಎಮ್ಮೆ ತೊಳೆದು ಎರಡು ಎತ್ತಿಗೂ ಮೇವು ಹಾಕಿ, ಎಮ್ಮೆಯನ್ನು ಹಿಂಡಿ, ಒಲೆಯ ಮೇಲೆ ಗಂಜಿಗಿಟ್ಟು, ಹಾಲು ಕೊಡುವದಕ್ಕೆ ಹೊರಬಿದ್ದಳು. ಹಾಲು ಕೊಟ್ಟು ತಿರುಗಿಬಂದರೂ ಮನೆಯಲ್ಲಿ ಅಪ್ಪ ಎದ್ದುದರ ಸುಳಿವೇ ಇಲ್ಲ. ಏನೋ ಮೈಯಲ್ಲಿ ಸ್ವಾಸ್ಥ್ಯವಿರಲಿಕ್ಕಿಲ್ಲವೆಂದು ಇಂದು ಮುಂಜಾನೆ ಅಪ್ಪ ಮಾಡುವ ಕೆಲಸವನ್ನು ತಾನೇ ಮಾಡಿದ್ದಳು. ಆದರೆ ೯ ಹೊಡೆದರೂ ಅಪ್ಪ ಎದ್ದಿರ ಲಿಲ್ಲ. ದಿನಾಲು ಇಷ್ಟು ಹೊತ್ತಿಗೆ ಎದ್ದು ಗಂಜೀ ಕುಡಿದು, ಗಳೇ ತೆಗೆದು ಕೊಂಡು ಹೊಲಕ್ಕೆ ಹೊರಡುವವ ಇನ್ನೂ ಹಾಸಿಗೆಯ ಮೇಲೆಯೇ ಇದ್ದ. ಚಿನ್ನಿ ಅಪ್ಪನ ಹಾಸಿಗೆಯ ಬಳಿ ಹೋದಳು. ಸೋಮ ಹಾಸಿಗೆಯ ಮೇಲೆ ಬಡಬಡಿಸುತ್ತಿದ್ದ. ಚಿನ್ನಿಯ ಎದೆ ಧಸ್ಸೆಂದಿತು. ಹಾಗೆ ಕೆಲ ನಿಮಿಷ ಆಲಿಸಿ ದಳು—

"........ಸಾಲ.........ನನ್ನ........ಚಿನ್ನಿ ಮದ್ವಿ........"

ಅಪ್ಪನನ್ನು ಕೈಮುಟ್ಟಿ ಚಿನ್ನಿ ಎಬ್ಬಿಸಹೋದಳು. ಸೋಮನ ಮೈ ಕಾದ ಕೆಂಡವಾಗಿತ್ತು. ಚಿನ್ನಿ ಮತ್ತೆ ನಡುಗಿದಳು. ಮೊದಲೇ ಸಾಲದ ಭಾರ, ಅಪ್ಪ ಜ್ವರದಿಂದ ಪೀಡಿತನಾಗಿ ಬಿಟ್ಟರೆ, ಔಷಧದ ವೆಚ್ಚಕ್ಕೆ ಎಲ್ಲಿಂದ ತರಬೇಕು ಎನ್ನುವ ಚಿಂತೆ ಅವಳಲ್ಲಿ ಮೂಡಿತು. ನಡುಗುವ ಕೈಗಳಿಂದಲೇ ಅಪ್ಪನನ್ನು ಎಬ್ಬಿಸಿದಳು.

"ಬಿಡಿ, ರಾಯರೇ‍ss ಕೈಗೆ ಹಗ್ಗ ಕಟ್ಟಬೇಡಿ. ನಾನು ಸಾಲ ಮುಟ್ಟಿಸುತ್ತೇನೆ" ಎಂದು ಸೋಮು ನಿದ್ದೆಗಣ್ಣಿನಲ್ಲಿಯೇ ಕೂಗಿಕೊಂಡ.

ಅದನ್ನು ಕೇಳಿದ ಚಿನ್ನಿಯ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಹರಿಯತೊಡಗಿತು. ಗಲ್ಲದ ಮೇಲೆ ಬಿದ್ದ ಕಣ್ಣೀರನ್ನು ಒರೆಸಿಕೊಳ್ಳದೇ ಚಿನ್ನಿ—

"ಅಪ್ಪಾ, ನಾನು ರಾಯರಲ್ಲ, ಚಿನ್ನಿ ನಿನ್ನ ಮಗಳು" ಎಂದು ಹೇಳಿದಳು.

"ಏನು ಚಿನ್ನಿss ನಾ. ಇದ್ದೀಯಾ. ನಾನೇನೊ ತಿಳಿದಿದ್ದೆ ಸತ್ತೆ ಎಂದು. ಅಂ" ಎಂದು ಗಹಿಗಹಿಸಿ ನಕ್ಕ ಚಿನ್ನಿ ಬೆಚ್ಚಿದಳು. ಅಪ್ಪನಿಗೆ ಎಲ್ಲಿ ಹುಚ್ಚು ಹಿಡಿಯಿತೋ ಎಂದಂಜಿದಳು. ಇದ್ದುದರಲ್ಲಿಯೇ ಧೈರ್ಯ ತಂದುಕೊಂಡು—

"ಅಪ್ಪಾ, ಒಂದು ಭಾಳ ಸಂತೋಷದ ಸುದ್ದಿ. ರಾಯರು ಅರ್ಧ ಸಾಲಾ ಸೂಟ ಬಿಡ್ತೇನೆ ಅಂತ ಹೇಳಿದರು" ಎಂದು ಸುಳ್ಳು ಹೇಳಿದಳು.

ಸಾಗರದ ಕಾಡು ಮರಳಿನಲ್ಲಿ ನಡೆಯುವವನಿಗೆ ನೀರು ಚಿಮುಕಿಸಿದಂತಾಗಿತ್ತು. ಸೋಮನ ಮುಖದ ಮೇಲಿನ ಹುಚ್ಚು ಕಳೆ ಮಾಯವಾಗತೊಡಗಿತು.

"ರಾಯರದು ದೊಡ್ಡ ಗುಣ. ದೇವರು ರಾಯರನ್ನು ಕಾಪಾಡಲಿ" ಎಂದು ಹೇಳಿ ಮತ್ತೆ ಹಾಸಿಗೆಯಲ್ಲಿ ಒರಗಿದ.

ಚಿನ್ನಿ ನಿಶ್ಚಿಂತೆಯ ದೀರ್ಘ ಶ್ವಾಸವನ್ನು ಬಿಟ್ಟಳು. ಏನೋ ಸುಳ್ಳು ಹೇಳಿ ಆ ಪಿಷನಿಮಿಷವನ್ನು ದೂಡಿದ್ದಳು. ಆದರೆ ಮುಂದೆ? ಎಂಬ ಪ್ರಶ್ನೆ ಅವಳ ಎದುರಿನಲ್ಲಿ ಭೂತಾಕಾರವಾಗಿ ನಿಂತಿತು. ತನ್ನ ಅಪ್ಪನೇ ತನಗೆ ಸರ್ವಸ್ವ. ಅದೇ ತನ್ನ ಪಂಚಪ್ರಾಣ. ಅದನ್ನೇ ಕಳೆದುಕೊಂಡರೆ....?

ಇಲ್ಲ. ಏನನ್ನಾದರೂ ಮಾಡಿ ಅಪ್ಪನನ್ನು ಉಳಿಸಿಕೊಳ್ಳಬೇಕು ಎಂದು ಮನದಲ್ಲಿ ನಿರ್ಧರಿಸಿ ಹೊರಬಂದಳು. ತೊಟ್ಟಿಯಲ್ಲಿ ಕಟ್ಟಿದ ಎಮ್ಮೆ ಒಂದು ಸಲ ಒದರಿತು. ಪಾಪ, ಕೆಲಸದ ಗಡಿಬಿಡಿಯಲ್ಲಿ ಅದಕ್ಕೆ ನೀರು ಕುಡಿಸುವದಕ್ಕೆ ಮರೆತಿದ್ದಳು. ಚಿನ್ನಿ ಒಮ್ಮೆಲೆ ಬಾದ್ಲಿಯನ್ನು ತೆಗೆದುಕೊಂಡು ಅಂಗಳಕ್ಕೆ ಡೋಣಿಯಲ್ಲಿಯ ನೀರು ತೆಗೆದುಕೊಳ್ಳುವದಕ್ಕೆ ಬಂದಳು ಸೂರ್ಯ ಕಿರಣಗಳು ಡೋಣಿಯ ನೀರಲ್ಲಿ ಬಿದ್ದುದರಿಂದ ನೀರು ಪಾರದರ್ಶಕ ಕನ್ನಡಿ

ಯಂತೆ ಕಂಗೊಳಿಸುತ್ತಿತ್ತು. ಚಿನ್ನಿ ನೀರಿಗಾಗಿ ಬಗ್ಗಿದಾಗ ಅಲ್ಲಿ ಅವಳ ಪ್ರತಿ ಬಿಂಬ ನಿಚ್ಚಳವಾಗಿ ಕಾಣಿಸತೊಡಗಿತು. ಅರೆನಿಮಿಷ ಹಾಗೆಯೇ ಬಗ್ಗಿ ನಿಂತಳು. ಮೈ, ಕೈ, ತುಂಬಿಕೊಂಡ ದೇಹ, ಬಗ್ಗಿದಾಗ ಮೇಲಿನ ಸೆರಗು ಜಾರಿ ಹೋಗಿತ್ತು. ಭರದಿಂದ ಉಬ್ಬಿದ ಎದೆ. ಪುಟಿ ಚೆಂಡುಗಳನ್ನು ಬಿಗಿ ಯಾಗಿ ಕಟ್ಟಿದಂತೆ ಭಾಸವಾಗುತ್ತಿತ್ತು. ಆ ಚಿತ್ರವನ್ನು ನೋಡುತ್ತಿರುವಂತೆ ಚಿನ್ನಿಗೆ ಅಪ್ಪನ ಸ್ಥಿತಿ ನೆನಪಾಯ್ತು. ಅವನ ಸಾಲ,....ಜ್ವರ....ಹುಚ್ಚು.

ನೀರಲ್ಲಿಯ ಆ ಯೌವನ ಮೂರ್ತಿ, ಎದೆ ಮುಂದೆ ಮಾಡಿ ಮಾದಕ ನಗೆ ನಕ್ಕಂತೆ ಭಾಸವಾಯಿತು. ಎಮ್ಮೆ ಮತ್ತೊಂದು ಸಲ ಕೂಗಿಕೊಂಡದ್ದ ರಿಂದ, ಚಿನ್ನಿಯ ಸಮಾಧಿ ಭಂಗವಾಯಿತು. ಬಾಲ್ದಿಯನ್ನು ನೀರಲ್ಲಿ ಮುಳು ಗಿಸಿದಳು. ನೀರು ಅಲ್ಲೋಲ ಕಲ್ಲೋಲವಾಯಿತು. ಸೂರ್ಯನ ಪರಿ ವರ್ತನ ಕಿರಣವೊಂದು ಅವಳ ಕಣ್ಣನ್ನು ಕುಕ್ಕಿಸಿತು. ಆ ಕಿರಣವೇ ಕತ್ತಲಲ್ಲಿ ಅವಳಿಗೆ ಆಶಾಕಿರಣವಾಗಿ ಗೋಚರಿಸಿತು. ನೀರಲ್ಲಿ ಹಾಗೇ ನೋಡುತ್ತಿರು ವಂತೆ ಅವಳಿಗೆ ಅಲ್ಲಿ ಮತ್ತೊಂದು ಪ್ರತಿಬಿಂಬ ಕಾಣಿಸಿತು. ಚಿನ್ನಿ ಬೆಚ್ಚಿ ಹಿಂತುರಿಗಿ ನೋಡಿದಳು. ಮತ್ತಾರೂ ಇರಲಿಲ್ಲ ರಾಯರು ಕೈಯಲ್ಲಿ ಕಿದರ್ ಬುಕ್ಕನ್ನು ಹಿಡಿದುಕೊಂಡು ಕಾಮಯುಕ್ತ ನಗೆಯನ್ನು ಬೀರುತ್ತಿದ್ದರು. ಮೊದಲು ಚಿನ್ನಿ ಅಂಜಿದಳು. ಆದರೂ ಮುಂದೆ— ಚಿನ್ನಿ ಮಾದಕ ನಗೆ ಯನ್ನು ಬೀರಿದಳು. ರಾಯರು—

"ಸಾಲದ ಹಣ ಕೇಳಲು ಬಂದಿದ್ದೆ."

"ರೂಪಾಯಿಗಳೇ ಬೇಕೇ ?"

"ಮತ್ತೇನು ?"

"ಅದರ ಬದಲು........"

"ಬಂಗಾರ, ಬೆಳ್ಳಿ, ಚಿನ್ನ ಏನಾದರೂ ಇದೆಯೇ ?"

"ಅದರ ಬದಲು ಚಿನ್ನ."

"ಸರಿ, ಆಗಬಹುದು"

"ಒಳಗೆ ಬನ್ನಿ."

ಚಿನ್ನಿ ರಾಯರನ್ನು ಕರೆದುಕೊಂಡು ತನ್ನ ತಂದೆ ಮಲಗಿದ್ದ ಪಡಸಾಲೆ ಯಿಂದಲೇ ಒಳಕೋಣೆಗೆ ಕರೆದುಕೊಂಡು ಹೋದಳು. ಸೋಮ ಅರ್ಧ ನಿದ್ದೆ

ಯಲ್ಲಿದ್ದರೂ ಅವನಿಗೆ ಒಳಚಿಲಕ ಹಾಕಿದ ಸಪ್ಪಳ ಕೇಳಿಸಿತು. ಸೋಮನ ಒಂದು ದೀರ್ಘ ಉಸಿರು—ಅದಕ್ಕೆ ಹಿನ್ನೆಲೆ ಸಂಗೀತವಾಗಿ ಮಾರ್ಪಡಿಸಿತು. ಹಾಗೇ ಮತ್ತೆ ಕಣ್ಣು ಮುಚ್ಚಿದ—ಎದುರಿನಲ್ಲಿ ಗಡಂಗದಲ್ಲಿ ಭಟ್ಟರ ಮೂರ್ತಿ ಕಾಣಿಸಿತು.

ಇನ್ನು ಮಗಳನ್ನು ಹೀಯಾಳಿಸುವದರಲ್ಲಿ ಏನರ್ಥವೆಂದುಕೊಂಡ. ಸೋಮನ ವಿಚಾರ ಪ್ರವಾಹ ನಿಲ್ಲುವುದಕ್ಕೆ ಒಂದು ಘಂಟೆ ಹಿಡಿಯಿತು. ಆ ಘಂಟೆಯಲ್ಲಿ ಚಿನ್ನಿ ಪ್ರಾಮೇಶ್ವರಿ ನೋಟನ್ನು ಹಿಂದಕ್ಕೆ ಪಡೆದಿದ್ದಳು.

---

# ಮತಾಂತರ.



ನಾನು ವಕೀಲಿ ವೃತ್ತಿಯನ್ನು ಪ್ರಾರಂಭಿಸಿದ ದಿನದಿಂದ ಇಂದಿನವರೆಗೆ ಸೋಲಿನ ಅನುಭವವೇ ಬಂದಿರಲಿಲ್ಲ. ಆದರೆ ಇಂದು ಮಾತ್ರ ಸೋಲು ಬರ ಬಹುದೆಂಬ ಚಿನ್ಹ ಕಾಣತೊಡಗಿತ್ತು. ಕೊನೆಯವರೆಗೆ ಅಜಿಂಕ್ಯನೆನಿಸಿಕೊಳ್ಳು ವದು ಕಷ್ಟಸಾಧ್ಯವಾದ ಮಾತೇ ಸರಿ.

ಅಂದು ಕೋರ್ಟಿನಲ್ಲಿ ಹೆಚ್ಚುಕಾಲ ನಿಲ್ಲುವದಕ್ಕೆ ಮನಸ್ಸೇ ಆಗಲಿಲ್ಲ ಬಾರ್ ರೂಮ್, ಬ್ರಿಜ್ ಮುಂತಾದವುಗಳ ಗೊಂದಲಕ್ಕೆ ಬೀಳದೇ ನೇರವಾಗಿ ಮನೆಯ ಹಾದಿಯನ್ನು ಹಿಡಿದೆ. ಮನೆಗೆ ಬಂದಾಕ್ಷಣವೇ, ನನ್ನವಳು ಸಿಡಿ ಮಿಡಿಗೊಂಡದ್ದನ್ನು ಗಮನಿಸಿದೆ. ಮೊದಲೇ ನನ್ನ ಮನಸ್ಸು ಅಸ್ತವ್ಯಸ್ತ ವಾಗಿತ್ತು. ಅದರ ಕಾರಣದಿಂದಲೋ ಏನೋ? ಹೆಂಡತಿಯ ಕೋಪ ಪ್ರಕ್ರಿಯತ್ತ ಸ್ವಲ್ಪ ಉದಾಸೀನತೆಯನ್ನು ತೋರಿಸುತ್ತಲೇ ಆರಾಮ ಖುರ್ಚಿ ಯಲ್ಲಿ ಒರಗಿದೆ ಬದಿಯ ಕೋಣೆಯಲ್ಲಿಯೇ ನನ್ನ ಭಾವ ಅಭ್ಯಾಸ ನಡೆ ಸಿದ್ದ. ಅವನು ಓದುತ್ತಿದ್ದ ಪದ್ಯದ ಕೆಲ ಸಾಲುಗಳು ನನಗೆ ಕೇಳಿಸತೊಡ ಗಿದವು.

" ಗುಣವಂತರ್ ಪಾಲುಂಡು ಮೇಲುಂಬರೇ ?
ರಂಭಾ ನೃತ್ಯದಿ ಡೊಂಬರೇ........ "

ಪರೀಕ್ಷೆಯಲ್ಲಿ ನಾಪಾಸಾದ ವಿದ್ಯಾರ್ಥಿಗೆ ಮತ್ತೆ ಮತ್ತೆ ಅವನನ್ನು ಅದ ಕ್ಕಾಗಿ ಹೀಯಾಳಿಸಿದರೆ, ಅವನು ತಾನು ಅನುತ್ತೀರ್ಣನಾದ ದುಃಖವನ್ನು ಮರೆತು, ತನ್ನನ್ನು ಹೀಯಾಳಿಸುವವರ ಮೇಲೆ ಹರಿಹಾಯುತ್ತಾನೆ. ಹಾಗೇ, ನನ್ನ ಭಾವನ ಬಾಯಿಂದ ಬಂದ ಸೋಮೇಶ್ವರ ಶತಕದ ವೇದ ವಾಕ್ಯಗಳು ನನ್ನ ಉದ್ವಿಗ್ನ ಮನಸ್ಸನ್ನು ಕೆರಳಿಸಿತು. ಒಂದು ಗುಡುಗನ್ನು ಹಾಕಿ ಅವ ನನ್ನು ಬೇರೆ ರೂಮಿಗೆ ಅಟ್ಟಿದೆ. ಸಭ್ಯ ಅವನನ್ನು ಹೊರದೂಡಿದರೂ ಅವೇ

ಶಬ್ದಗಳು ನನ್ನ ಕಿವಿಯಲ್ಲಿ ಪ್ರತಿಧ್ವನಿಸಲಾಗತೊಡಗಿದವು. ಘಂಟೆ ಹೊಡೆದ ಮೇಲೂ ಎಷ್ಟೋ ವೇಳೆಯವರೆಗೆ ಅದರ ಝುಂಕಾರ ಕೇಳಬರುತ್ತದೆ ಹಾಗೇ ಅದೇ ವಾಕ್ಯದ ಝುಂಕಾರ ಪುನಃ ಪುನಃ ಕೇಳತೊಡಗಿತು.

"ಗುಣಯುತರ್ ಪಾಲುಂಡು ಮೇಲುಂಬರೇ ?
ರಂಭಾ ನೃತ್ಯದಿ ಡೊಂಬರೇ ........ ?"

ನಾನು ನನ್ನಷ್ಟಕ್ಕೆ ನಾನೇ ನಕ್ಕೆ. ಹಳೆಯ ನಾಣ್ಣುಡಿಗಳು ಜನತೆಯ ಸಿಹಿ ಕಹಿ ಅನುಭವದ ಸಾರವಾಗಿದ್ದರೂ, ಅವುಗಳ ಅರ್ಥ ನಿತ್ಯನೂತನವೆಂದು ಈಗ ಒಪ್ಪಲು ಹಿಂಜರಿಯತೊಡಗಿತು. ಉದಾಹರಣಕ್ಕೆ ದೂರ ಹೋಗಲೇ ಬೇಕಿಲ್ಲ. ಕೋರ್ಟಿನಲ್ಲಿ ಇನ್ನು ಬರಬಹುದಾದ ಕೇಸು—

—ದೇಶಪಾಂಡೆ ನನ್ನ ಬಾಲಮಿತ್ರ. ತನ್ನ ಸುರೂಪ ಸುಂದರಿಯಾದ ಹೆಂಡತಿಯನ್ನು ಬಿಟ್ಟು, ಆ ಬೇರೆ ಹುಡುಗಿಯ ಜತೆಯಲ್ಲಿ ಪ್ರಣಯ ಬೆಳೆಸ ಬೇಕೇ ? ಆ ಹುಡಿಗೆ ಮತ್ತು ಅವನ ಹೆಂಡತಿ ಇಬ್ಬರನ್ನೂ ಸೌಂದರ್ಯ ಸ್ಪರ್ಧೆಗಾಗಿ ನಿಲ್ಲಿಸಿದರೆ—ರಂಭೆ ಡೊಂಬರು ಹೆಣ್ಣುಗಳನ್ನು ಸ್ಪರ್ಧೆಗೆ ನಿಲ್ಲಿಸಿದಷ್ಟು ಹಾಸ್ಯಾಸ್ಪದ.

ಹೀಗಿದ್ದೂ ಸೋಮೇಶ್ವರ "ಗುಣಯುತರ್ ಪಾಲುಂಡು ಮೇಲುಂಬರೆ ರಂಭಾ ನೃತ್ಯದಿ ಡೊಂಬರೇ........" ಎಂದು ಹೇಳುತ್ತಾನೆ.

ನನ್ನ ವಿಚಾರಸರಣಿ ಇನ್ನೂ ನಡೆಯುತ್ತಿರುವಾಗಲೇ, ಸೂರ್ಯ ಮುಳುಗಿ ಸಂಧಿ ಪ್ರಕಾಶವೂ ಮರೆಯಾಗತೊಡಗಿತ್ತು. ಮನೆಯ ಆಳು ಬಂದು ನಾನು ಕತ್ತಲಲ್ಲಿಯೇ ಕೂತದ್ದನ್ನು ಗಮನಿಸಿ ವಿದ್ಯುತ್‌ದೀಪದ ಬಿರಡೆಯನ್ನು ಅದುಮಿದ. ನನ್ನ ಎದುರಿನಲ್ಲಿ ಇಳಿಬಿದ್ದ ದೀಪ ಪ್ರಕಾಶಮಾನವಾಯಿತು.

ದೀಪ ಹತ್ತಿದಾಕ್ಷಣ ಕೋಣೆಯ ಕತ್ತಲೆ ಮಾಯವಾಯಿತು. ನನ್ನ ವಿಚಾರಗಳ ತಾಕಲಾಟಗಳಿಗೂ ಹೊಸ ಬೆಳಕು ದೊರೆಯಿತು. ಆ ದೀಪ ಜೋತಾಡುತ್ತಿತ್ತು. ಆ ದೀಪದ ಕೆಳಗೆ........"

"........ಕೆಳಗೆ ಕತ್ತಲು" ಎಂದು ಸಂಪ್ರದಾಯ ಶರಣರ ತುಟಿ ಉತ್ತರ ಹೇಳಬಹುದಿತ್ತು.

ಆದರೆ ದೀಪದ ಕೆಳಗೆ ಕತ್ತಲವಿರಲಿಲ್ಲ. ತುಂಬ ಬೆಳಕು ಬಿದ್ದಿತ್ತು.

"ದೀಪದ ಕೆಳಗೆ ಕತ್ತಲು" ಈ ಹಳೆಯ ನಾಣ್ಣುಡಿ ವಿಜ್ಞಾನ ಯುಗ ದಲ್ಲಿ ಹಳೆದಾಗಿ ಹೋಯಿತು. ಆದರ ಸತ್ಯನೂತನತೆ ಧ್ವಂಸವಾಯಿತು.

ಹಾಗಾದರೆ ದೇಶಪಾಂಡೆಯ ಅಪರಾಧ.... ...? ಆ ಅಪರಾಧವೂ ಈ ದ್ವಿಭಾರ್ಯಾ ಪ್ರತಿಬಂಧಕ ಕಾಯಿದೆಯಲ್ಲಿ ಕ್ಷಮ್ಯವಾಗಬಲ್ಲದು ಆದರೆ....?

ನನ್ನ "ಆದರೆ" ಶಬ್ದ ಮುಗಿಯುವ ಮೊದಲೇ ನನ್ನ ಹೆಂಡತಿ ನನ್ನ ಎದುರು ಬಂದು ನಿಂತಳು. ಅವಳು ಬಂದು ನಿಂತ ರೀತಿಯನ್ನು ನೋಡಿದರೆ "ಹೆಂಡತಿ! ಹೆಂಡತಿ" ಎಂದು ಹಂಬಲಿಸುವ ಬ್ರಹ್ಮಚಾರಿಗಳ ಬಳಗಕ್ಕೆ ನಾನೂ ಒಬ್ಬನು ಸೇರಿದ್ದರೆ ಒಳಿತಿತ್ತು ಎಂಪೆನಿಸಿತು.

"Victories Garland is better than victory" ಎಂಬ ಆಂಗ್ಲ ನುಡಿ ನೆನಪಿಗೆ ಬಂತು. "ಆದರೆ" ಶಬ್ದ ಮತ್ತೆ ಮುಂದೆ ನಿಂತಿತು. "ಖುರ್ಚಿಯ ಮೇಲೆ ಕೂಡು" ಎಂದು ಹೇಳಿದೆ. ಅವಳು ಕೂತಳೇನೋ ನಿಜ. ಕೂಡುವಾಗ ಶಾಂತಳಾಗಿಯೇ ಇದ್ದಳು. ಆದರೆ ಆ ಶಾಂತಿ ಶಾಶ್ವತ ಶಾಂತಿಯ ಸಂಜ್ಞೆಯಾಗಿರಲಿಲ್ಲ. ಬಿರುಗಾಳಿಯ ಪೂರ್ವದ ಭಯಾನಕ ಶಾಂತಿ........!

....... ಒಮ್ಮೆಲೆ ಜ್ವಾಲಾಮುಖಿಯ ಸ್ಫೋಟವಾದಂತಾಯಿತು. "ಈ ಗಂಡುಸರ ಜಾತೀನ ಇಷ್ಟು ಹರಾಮಖೋರ. ನಾಯಿಗಳನ್ನು ಎಷ್ಟು ಕಟ್ಟಿ ಹಾಕಿದರೇನು. ಮತ್ತ ಹೊರಗ ಅಡ್ಡಾಡೋದು." ನನ್ನ ಹೆಂಡತಿ ಒಂದು ಸಲ ಇಡೀ ಪುರುಷ ಜಾತಿಯ ಉದ್ಧಾರ ಮಾಡಿದಳು. ನನಗೆ ತುಂಬಾ ಸಿಟ್ಟು ಬಂದಿತು. ಆದರೆ ಕೋರ್ಟಿನಲ್ಲಿ ಗಳಿಸಿದ ಕಹೀ ಅನುಭವ ನನ್ನನ್ನು ನಿಶ್ಶಕ್ತನನ್ನಾಗಿ ಮಾಡಿಬಿಟ್ಟಿತ್ತು. ಬರೀ ಸಿಟ್ಟಿನಿಂದೇನಾಗಬೇಕು. ಕೋರ್ಟಿನಲ್ಲಿಯ ತೀರ್ಮಾನಕ್ಕೆ ಕಾರ್ಯಕಾರೀ ಮಂಡಳದ ಸಂಬಂಧ ತಪ್ಪಿದರೆ ಆ ತೀರ್ಮಾನ ಕೃತಿಯಲ್ಲುಳಿಯದು.

ನನ್ನ ಶಕ್ತಿ ಇಲ್ಲದ ಸಿಟ್ಟು........ಬಿಳೀ ಪತಾಕೆಯನ್ನೇರಿಸಿದ ಪಡೆಯ ಸೇನಾಧಿಪತಿಯಂತೆ ಸೌಮ್ಯದಿಂದಲೇ ಕೇಳಿದೆ. "ಈ ಗಂಡಸರು ಯಾವ ಸ್ತ್ರೀ ರಾಜ್ಯದ ಮೇಲೆ ದಾಳಿ ಇಕ್ಕಿದ್ದಾರೆ ?"

"ಇಲ್ಲಿ ನೋಡಿ" ಎಂದು ಸಿಟ್ಟಿನಿಂದಲೇ ಒಂದು ಪೋಸ್ಟ ಪಾಕೀಟನ್ನು ನನ್ನ ಮೈಮೇಲೆ ಎಸೆದಳು. ನನ್ನ ಹೆಂಡತಿಯ ಸಿಟ್ಟಿನ ಮುಖ್ಯ ಕಾರಣ ಈ

ಕಾದವೇ ಎಂದು ನನಗೆ ತುಂಬಾ ಆನಂದವಾಯಿತು. ಜಾನಪದ ಕತೆಯಲ್ಲಿ ನಾಯಕನಿಗೆ ರಾಕ್ಷಸನ ಪ್ರಾಣ ಎಲ್ಲಿದೆಯೆಂಬುದು ಅವನಿಗೆ ತಿಳಿದಾಗ.......

ಅಂತೂ ಪಾಕೀಟಿನೊಳಗಿಂದ ಕಾಗದವನ್ನು ಹೊರತೆಗೆದು ಓದತೊಡಗಿದೆ. ಪತ್ರದ ಮೊದಲು ಮೂರು ಸಾಲುಗಳನ್ನೋದಿದಾಕ್ಷಣವೇ ಆಶ್ಚರ್ಯದ ಬುಗ್ಗೆಯೊಡೆಯಿತು. ವಿಚಾರಸಾಮ್ಯಗಳು ಮನುಷ್ಯನಿಗೆ ವಿಲಕ್ಷಣ ಆಶ್ಚರ್ಯ, ಆನಂದ ತಂದೊಡ್ಡುತ್ತವೆ.

ಹೆಂಡತಿ ಸಿಟ್ಟಾದುದು ಅದಕ್ಕಾಗಿಯೇ? ಎಂದೆ. ಪತ್ರ ದೇಶಪಾಂಡೆಯವರ ಪತ್ನಿ ನನ್ನವಳಿಗೆ ಬರೆದಿದ್ದಳು. ಅದು ಒಂದು ಪತ್ರವೆನ್ನೋದುವದಕ್ಕಿಂತಲೂ ಜ್ವಾಲಾಮುಖಿಯ ಸ್ಫೋಟ ಎನ್ನಬಹುದಿತ್ತು. ಗತಿಗಾಣದವನಾಗಿ ಓದತೊಡಗಿದೆ.

“ ನನ್ನ ಪ್ರಾಣದ ಗೆಳತಿ, ಕಮಲಾಗೆ—

ವಂದನೆಗಳು. ನನ್ನ ಇವರು, ತಮ್ಮ ಆಫೀಸಿನಲ್ಲಿಯ ಹುಡುಗಿಯ ಜತೆಯಲ್ಲಿ ಲಗ್ನವಾಗುವ ಸುದ್ದಿಯನ್ನು ನೀನು ಈಗಾಗಲೇ ವೃತ್ತಪತ್ರಿಕೆಯಲ್ಲಿ ಓದಿರಬಹುದು.

ನನ್ನ ಜೀವನದಲ್ಲಿಯ ಆನಂದ ಇಂದಿಗೇ, ಇಲ್ಲಿಗೇ ಮುಗಿದಂತಾಯ್ತು. ನಾನು ಮಾಡಿದ ಪಾಪವೇನೆಂಬುದೇ ನನಗೆ ತಿಳಿಯದು.

ಇವರಿಂದ ನನಗೆ ದುಡ್ಡು ಬೇಕಾಗಿರಲಿಲ್ಲ. ಯಾವದಕ್ಕೂ ನಾನು ತೊಂದರೆ ಕೊಡಲಿಲ್ಲ. ‘ ಬೇಕು ’ ಎಂದಾಗ ಬೇಕಾದಷ್ಟನ್ನು ಕೊಡಲು, ನನ್ನ ತಂದೆ ಸಮರ್ಥರಿದ್ದರು, ಇದ್ದಾರೆ. ಇವರ ದುಡ್ಡಿನ ಆಸೆ ನನಗಿರಲಿಲ್ಲ.

ಬೇರೆಯವಳನ್ನು ಮದುವೆಯಾಗಿ ನನ್ನನ್ನು ಹಿಂಸಿಸಬೇಕೆಂದು ಅವರು ಲೆಕ್ಕ ಹಾಕಿರಬಹುದು. ಆದರೆ?

ಆದರೆ ನಾನು ಮಲತಾಯಿಯ ಹಾಲನ್ನು ಕುಡಿದು ಬೆಳೆದಿಲ್ಲ. ಇನ್ನು ಸ್ತ್ರೀಯರು ಬಂಡು ಹೂಡಲೇ ಬೇಕು. ಪುಂಡರಂತೆ ಆಳುವ ಇಂಥ ಗಂಡಂದಿರನ್ನು ದಾರಿಗೆ ತರುವದಕ್ಕೆ—

ಇರಲಿ, ವಿಶೇಷ ಎಂದರೆ ನನ್ನ ತಂದೆ ಅವರ ಮೇಲೆ ಕೇಸನ್ನು ಹಾಕಿದ್ದಾರೆ. ದ್ವಿಭಾರ್ಯಾ ಪ್ರತಿಬಂಧಕ ಕಾಯ್ದೆಯ ಕೆಳಗೆ ಅವರು ಆರೋಪಿಗಳು. ನನ್ನ ತಂದೆಯವರು ಆ ಕೇಸನ್ನು ನಿನ್ನ ಯಜಮಾನರಿಗೆ ಒಪ್ಪಿಸಿ

ದ್ದಾರಂತೆ. ನಿನ್ನ ಯಜಮಾನರು ಧಾರವಾಡದಲ್ಲಿ ಗಣ್ಯ ವಕೀಲರೆಂದು ಹೆಸರಾಗಿದ್ದಾರೆ. ಅವರಿಗೆ ಈ ಕೇಸಿನಲ್ಲಿ ಹೆಚ್ಚು ಜಾಗರೂಕತೆಯನ್ನು ವಹಿಸಲಿಕ್ಕೆ ಹೇಳು. ಇದು ನನ್ನೊಬ್ಬಳದೇ ಪ್ರಶ್ನೆ ಅಲ್ಲ. ಸ್ತ್ರೀ ಜಾತಿಯ ಮಾನದ ಪ್ರಶ್ನೆಯಾಗಿದೆ.

ನಾರಿಯನ್ನು ಬರೀ ಭೋಗದ ವಸ್ತುವೆಂದು ತಿಳಿದ ಈ ನೀಚ ಗಂಡಂದಿರಿಗೆ ನಾವು ಕೇವಲ ಭೋಗದ ವಸ್ತುವಲ್ಲ. ಕೆಣಕಿದಾಗ ವಿಷ ಕಾರುವ ಘಟಸರ್ಪವೆಂಬುದನ್ನು ತೋರಿಸಬೇಕಾಗಿದೆ.

ಈ ಕೋರ್ಟಿನಲ್ಲಿ ಅವರಿಗೆ ಜೈಲಾದರೆ ನನ್ನ ತಳಮಳಿಸುವ ಜೀವಕ್ಕೆ ಅತ್ಯಾನಂದವಾಗುತ್ತದೆ. ಆಗಲೇ ನನಗೆ ಶಾಂತಿ—ಶಾಂತಿ—ಶಾಂತಿ. ಆಗಲೇ ನನಗೆ ಸಮಾಧಾನ, ಸಮಾಧಾನ.

ನಿನ್ನ
ನಲಿನಿ ದೇಶಪಾಂಡೆ.

ಪತ್ರವನ್ನು ಓದಿ ಮುಗಿಸಿದಾಗ ನನ್ನ ಮೈಯೆಲ್ಲಾ ಬೆವೆತಿತು. ಪತ್ರದಲ್ಲಿಯ ನೋಡಿನ ಕಾಡ್ಗಿಚ್ಚಿಗಾಗಿ. ನಾನು ಆಗ ಕೋರ್ಟಿನಲ್ಲಿ ಹಿಡಿದ ಕೇಸು ನಲಿನಿಯ ತಂದೆಯವರದೇ ಆಗಿತ್ತು. ಅವಳ ತಂದೆಯೂ ಸಾಮಾನ್ಯ ಮನೆತನಕ್ಕೆ ಸೇರಿದವರಲ್ಲ, ತುಂಬಾ ಸಿರಿವಂತರು. ಮೇಲಾಗಿ ಒಂದು ತಾಲ್ಲೂಕಿನ ಮಾಮಲೇದಾರರು. ಅದಕ್ಕೆಯೇ ನಾನು ಅವರ ಖಟ್ಲೆಯನ್ನು ಹಿಡಿಯುವದಕ್ಕೆ ಮನಸ್ಸು ಮಾಡಿದ್ದೆ. ಹಿಡಿದೂ ಬಿಟ್ಟಿದ್ದೆ. ಕೊರತೆಯ ದಿನಗಳಲ್ಲಿ ನನಗೆ ಈ ಕೇಸು ಒರತೆಯಾಗಿಯೇ ಕಂಡಿತ್ತು. ನನಗೆ ಆ ಬಡ ಪಾಯಿಯ ಗೋಳು ಅಷ್ಟಕ್ಕಷ್ಟೇ ಆಗಿತ್ತು.

— ಡಾಕ್ಟರರು ತಮ್ಮ ಕರ್ತವ್ಯ ನೆರವೇರಿಸುತ್ತಾರೆ. ರೋಗಿ ಸತ್ತರೆ, ಅವರ ಕಣ್ಣಲ್ಲಿ ನೀರು ಬರಬಹುದೇ?

ಆದರೆ ಈ ಪತ್ರ ಓದಿದ ನಂತರ ನನ್ನ ಭಾವವೇ ಬದಲಾಯಿತು. ಯಾವದೋ ಒಳಗುದಿ ನನ್ನ ಎದೆಯನ್ನು ಕೊರೆಯತೊಡಗಿತ್ತು. ನಾನಾರಿಗೂ ಅಂಜದಿದ್ದರೂ ಹೆಣ್ಣನ್ನು ನೋಯಿಸುವ ಗೋಜಿಗೆ ನಾನು ಹೋಗುತ್ತಿರಲಿಲ್ಲ. ಆದರೆ ಈ ಹೆಣ್ಣು ಬರೆದ ಪತ್ರ ನನ್ನ ಹೃದಯದಲ್ಲಿ ನೋವಿನ ಕಳವಳಗಳ ಮಿಶ್ರಣದ ಹುಡಿಯನ್ನೆಬ್ಬಿಸಿತು.

—ಖಟ್ಲೆಯನ್ನೇನೋ ನಾನು ಹುಮ್ಮಸದಿಂದ ಹಿಡಿದಿದ್ದೆ. ಆದರೆ,—ಅವರು ತಂದ ಸುದ್ದಿಯಿಂದ ನನಗೆ ಸೋಲಿನ ಭಯ ಪ್ರಾರಂಭವಾಯಿತು. ನಿನ್ನಿನ ಪತ್ರಿಕೆಯಲ್ಲಿ ಆ ಸುದ್ದಿಯೂ ಪ್ರಕಟವಾಗಿತ್ತು.

"ಮಾಧ್ವರು ಮಹಮ್ಮದೀಯರಾದರು" ದಪ್ಪಕ್ಷರದ ಆ ಸುದ್ದಿಯಿಂದ ನನಗೆ ಗೆಲುವಿನ ಆಶೆ ಕಡಿಮೆಯಾಗತೊಡಗಿತು. ದೇಶಪಾಂಡೆ ಸರ್ವಸಾಧಾರಣವಾಗಿ 'ದ್ವಿಭಾರ್ಯಾ ಪ್ರತಿಬಂಧಕ' ಕಾಯ್ದೆಯ ಕಟಾಕ್ಷದೊಳಗಿಂದ ಪಾರಾಗಲು........?

ಈ ನನ್ನ ತಲೆ ತುರಿಸಿಕೊಳ್ಳುವ ಆಟ ನನ್ನ ಹೆಂಡತಿಗೆ ಸಹನವಾಗಲಿಲ್ಲವೇನೋ? ಒಮ್ಮೆಲೇ ಕೇಳಿದಳು.

"ನಲಿನಿ ಬರೆದಂತೆ ಜಹಗೀರದಾರರು ಈ ಕೇಸನ್ನು ನಿಮಗೆ ಒಪ್ಪಿಸಿದ್ದಾರೆಯೇ?"

"ಹೌದು."

"ಈಗ ಕೋರ್ಟಿನಲ್ಲಿ ಕೇಸು ನಡೆದಿದೆಯೇ?"

"ಇಲ್ಲ—ನಾಳೆನಿಂದ ಪ್ರಾರಂಭ."

"ನೀವು ಮಾತಿನಲ್ಲಿ ಉದಾಸೀನತೆ ತೋರಿಸ್ತಾ ಇದೀರಿ."

"ಈವರೆಗೆ ನನಗೆ ಸೋಲೆಂಬುದೇ ಗೊತ್ತಾಗಿರಲಿಲ್ಲ. ಆದರೆ ಇದರಲ್ಲಿ?"

"ಸಾಕು. ನೀವೆಲ್ಲಾ ಗಂಡುಸರು ಹೀಗೆನೆ.... ಅವನು ನಿಮ್ಮ ಬಾಲಮಿತ್ರ ಆದಕ್ಕೆ....?"

"ಅವನು ನನ್ನ ಮಿತ್ರ ನಿಜ. ಅವನ ಹೆಂಡತಿ ನಿನ್ನ ಗೆಳತಿ. ಆದರೆ ಕೋರ್ಟಿನಲ್ಲಿ ನಾನು ವಕೀಲ. ಕರ್ತವ್ಯಶೀಲ ಡಾಕ್ಟರ, ಶತ್ರುವಿಗೆ ಜ್ವರ ಬಂದಾಗ ಔಷಧದಲ್ಲಿ ವಿಷ ಬೆರಿಸಿ ಕೊಲ್ಲಬಹುದೇ?"

"ನನಗೆ ನಿಮ್ಮ ವಕೀಲಿ ಮಾತು ಒಂದೂ ಗೊತ್ತಾಗೋದಿಲ್ಲಾ. ಏನೇ ಆಗಲಿ. ಆ ನೀಚನಿಗೆ ಒಂದು ವರ್ಷವಾದರೂ ಜೈಲಿಗೆ ಕಳಿಸಿ."

ಅನವಶ್ಯಕ ಮಾತುಗಳನ್ನು ಬೆಳಿಸುವದಕ್ಕಿಂತಲೂ ಪೂರ್ಣವಿರಾಮವನ್ನಿಡುವದೇ ಲೇಸೆಂದು "ಹೂಂ" ಎಂದು ಹೇಳಿ ಎದ್ದುಬಿಟ್ಟೆ.

ಮರುದಿನ ಕೋರ್ಟಿಗೆ ಹೊರಡುವವನಿದ್ದೆ. ಊಟ ಮಾಡಿ ಮನೆ ಯಿಂದ ಹೊರಬೀಳುವದರಲ್ಲಿದ್ದೆ. ಆಗಲೇ ಪೋಸ್ಟಮನ್ ನನ್ನ ಕೈಗೆ ದಪ್ಪ ವಾದ ಪಾಕೀಟನ್ನು ಕೊಟ್ಟು ನಡೆದ. ನಾನು ಇಂಥ ದೊಡ್ಡ ವಕೀಲನಾ ದರೂ ಶುಭಾಶುಭ ಫಲಗಳನ್ನು ನೋಡುವ ನನ್ನ ಸಂಪ್ರದಾಯತೆ ನನ್ನಲ್ಲಿ ಹಾಗೆಯೇ ಉಳಿದಿತ್ತು. ಬಂದ ಪತ್ರದಿಂದ ನನಗೆ ಶುಭವೇ ಅಶುಭವೇ ಎಂದು ವಿಚಾರಿಸುತ್ತ, ಸ್ವಲ್ಪ ಅಧೀರತೆಯಿಂದಲೇ ಪಾಕೀಟನ್ನು ಒಡೆದು ಓದತೊಡಗಿದೆ

ಮಿತ್ರವರ್ಯನಿಗೆ—

ದೇಶಪಾಂಡೆಯ ಅನಂತ ವಂದನೆಗಳು. ತರುವಾಯ ಇದೇ ಪತ್ರ ವನ್ನು ನಾಲ್ಕೈದು ದಿನಗಳಿಂದ ಬರೆಯುತ್ತಿದ್ದೇನೆ. ಬರೆದು ಎಷ್ಟೋ ಸಲ ಪೂರ್ಣವಾಗಿ ಮುಗಿಸಿದೆ. ಆದರೂ ಅದನ್ನು ಪೋಷ್ಟಿನ ಡಬ್ಬಿಯನ್ನು ಕಾಣಿಸಲಾಗಲಿಲ್ಲ. ಎಷ್ಟು ಪತ್ರಗಳನ್ನು ಹಾಗೆ ಹರಿದು ಒಗೆದೆನೋ ತಿಳಿ ಯದು. ಆದರೂ ಈಗ ಯಾವುದೋ ಒಂದು ಧೈರ್ಯದಿಂದ ಈ ಪತ್ರ ಬರೆಯುತ್ತಿದ್ದೇನೆ. ಎದುರು ನಿಂತು ನಾನು ನನ್ನ ಕರುಣ ಕಥೆಯನ್ನು ಹೇಳ ಲೆತ್ನಿಸಿದ್ದರೆ—ನೀನು ನನ್ನನ್ನು ಮಾತನಾಡಿಸಿಯೇಗೊಡುತ್ತಿರಲಿಲ್ಲ. ಇಡೀ ಸಮಾಜ ನನ್ನನ್ನು ಇಂದು ಬಯ್ಯುವಂತೆ, ನೀನೂ ನನ್ನಮೇಲೆ ಬೈಗಳ ಸುರಿ ಮಳೆಯನ್ನು ಸುರಿಸುತ್ತಿದ್ದೆ. ಆದರೆ ಹೃದಯದ ಕಪಾಟವನ್ನು ತೆರೆದಿಡುವ ದಕ್ಕೆ ಪತ್ರವೊಂದೇ ಶುದ್ಧ ಸಾಧನ.

—ನಾನು ನೀನೂ ಕೂಡಿಯೇ ಓದಿದೆವು, ಆಡಿದೆವು. ನಾನು ಪೋಲಿಸ ಖಾತೆಯನ್ನು ಸೇರಿದೆ. ನೀನು ವಕೀಲನಾದೆ. ಮುಂದೆ ನಮ್ಮಿಬ್ಬರ ಮದುವೆ ಗಳೂ ಆದವು. ನನ್ನ ಮದುವೆಯಾದ ದಿನದಿಂದ ತೊಂದರೆಯ ಕಾಲ ಪ್ರಾರಂಭವಾಯಿತು.

'—ಕಾಮಃಪ್ರಕೃತಿ, ಪ್ರೇಮ ಸಂಸ್ಕೃತಿ' ಎಂದು ಬಲ್ಲವರು ಹೇಳುತ್ತಾರೆ. ನನ್ನ ಸೌಭಾಗ್ಯವೋ ದುರ್ಭಾಗ್ಯವೋ ನನ್ನ ಹೆಂಡತಿಯಾಗಿ ಬಂದವಳು, ಸಿರಿ ವಂತರ ಮನೆಯಲ್ಲಿ ಜನ್ಮವೆತ್ತಿದ್ದಳು. ತನ್ನ ಸಿರಿತನ, ತನ್ನ ದೊಡ್ಡಸ್ತಿಕೆ ಯಲ್ಲಿಯೇ ಅವಳು ಸದಾಕಾಲ ಕಳೆಯುತ್ತಿದ್ದಳು. ಕಾಮ ಪ್ರಕೃತಿ ಎಂದು ಹೇಳಿದ್ದಾರಷ್ಟೇ. ಅದೊಂದು ಸಹಜ ಪ್ರಕೃತಿ ಸ್ವಭಾವ. ಹಸಿವಾದಾಗ

ಊಟ ಅನಿವಾರ್ಯ. ಆ ಊಟದಲ್ಲಿ ಆನಂದ ಸೊಗಸುಗಳಿದ್ದರೆ ಅದಕ್ಕೆ ರುಚಿ ಹೆಚ್ಚು. ನನ್ನ ಮನೆಯಲ್ಲಿ ಆಳುಹೋಳುಗಳಿಗೆ ಕಡಿಮೆ ಇಲ್ಲ. ಆದರೆ ನನ್ನ ಎಲ್ಲ ಕೆಲಸಗಳನ್ನು ಆಳುಹೋಳುಗಳೇ ಮಾಡಿದರೆ? ಕೆಲಸಕ್ಕೆ ತೊಂದರೆಯಾಗುತ್ತಿರಲಿಲ್ಲ ನಿಜ. ಆದರೆ ಮನಸ್ಸಿಗೆ ಸಮಾಧಾನ ದೊರೆಯುತ್ತಿರಲಿಲ್ಲ.— ನನ್ನ ಎದುರುಮನೆಯಲ್ಲಿಯ ಗೃಹಸ್ಥ ಆಫೀಸಿನಿಂದ ಮರಳಿ ಬಂದಾಕ್ಷಣ, ಅವನ ಹೆಂಡತಿ ಮುಗುಳುನಗೆ ನಕ್ಕು ಸ್ವಾಗತಿಸಿ, ನಾಲ್ಕು ನಗು ಮಾತುಗಳನ್ನಾಡಿ ಅವನಿಗೆ ಚಹ ತಂದು ಕೊಡುತ್ತಾಳೆ. ಅವನೇ ಭಾಗ್ಯವಂತ ಎಂದೆನಿಸುತ್ತದೆ. ಅವರಿಬ್ಬರೂ ಕೂಡಿ ತಿರುಗಾಡಲು ಹೊರಟರೆ, ನನಗೆ ಈ ಜನ್ಮದಲ್ಲಿಯೇ ಭಾಗ್ಯವಿಲ್ಲವೇ ಎಂದೆನಿಸಿಬಿಡುತ್ತದೆ.

ನನ್ನ ಹೆಂಡತಿ ಮನಸ್ಸು ಬಿಚ್ಚಿ ಮಾತನಾಡುವದಿಲ್ಲ. ನಾನು ಮನೆಗೆ ಬಂದಾಕ್ಷಣ, ಆಳುಮಗನೇ ಚಹ ತಂದು ಕೊಡಬೇಕು. ಅಡಗಿಯವಳೇ ಊಟಕ್ಕೆ ಹಾಕಬೇಕು. ತಿರುಗಾಡುವದಕ್ಕೆ ನಾನೊಬ್ಬನೇ ಒಂಟಿಯಾಗಿ ಹೋಗಬೇಕು.

ನನ್ನ ವೃತ್ತಿ ಪೋಲೀಸನದು. ಆಫೀಸಿನಲ್ಲಿಯ ಎಲ್ಲ ಅವಧಿ ಕಠೋರ ವಾತಾವರಣದಲ್ಲಿ ನಡೆದು ಹೋಗುತ್ತದೆ. ಜಗತ್ತನ್ನೇ ಸುಟ್ಟು ಭಸ್ಮ ಮಾಡುತ್ತ ನಡೆದ ಭಸ್ಮಾಸುರನನ್ನು ಕೆಲಕಾಲವಾದರೂ ಆನಂದಪಡಿಸಬೇಕಾದರೆ ಮೋಹಿನಿ ಬೇಕಾದಳು —

ಇಲ್ಲಿ ನನ್ನ ಮೋಹಿನಿ? ಅವಳಲ್ಲಿ ರೂಪವಿದೆ, ಸೌಂದರ್ಯವಿದೆ. ಆದರೆ ಏನು? ನಾನು ಕವಿಯಲ್ಲ. ಆದರೂ ಜಾನಪದ ಗೀತೆಯ ಒಂದು ನೆನಹು ಬಂದಿತು. ಅದನ್ನೇ ಹೇಳುತ್ತೇನೆ.

"ಕರಿಯ ಹೆಂಡತಿ ಎಂದು ಮರುಗಬೇಡ. ನೇರಲ ಹಣ್ಣು ಅತೀ ಕಪ್ಪು ಅದರಾಗ ರುಚಿ ಭಾಳ— "

"ಕೆಂಪು ಹೆಂಡತಿ ಎಂದು ಸಂತಸ ಪಡಬ್ಯಾಡ, ಅತ್ತಿಯ ಹಣ್ಣು ಬಲು ಕೆಂಪು ಅದರಾಗ ಹುಳ ಭಾಳ— "

ಈಗ ನಾನು ಮದುವೆಯಾದ ಹೆಣ್ಣು ಅಷ್ಟು ಸುಂದರಳಿಲ್ಲವೆಂದು ಈ ಪದ್ಯದ ಅವತರಣಿಕೆಯನ್ನು ಕೊಟ್ಟೆನೆಂದು ನಿನ್ನಲ್ಲಿಯ ವಕೀಲ ಬುದ್ಧಿ ಹೇಳಬಹುದು. ಆದರೆ ನಲಿನಿಯ ರೂಪ, ಕೇವಲ........

............ಮಿಡಿನಾಗರ ಹಾವು, ಹೆಡೆ ತೆಗೆದು ಕುಣಿಯುವಾಗ ಎಷ್ಟು ಸುಂದರವಾಗಿ ತೋರುತ್ತದೆ?

ನಮ್ಮಿಬ್ಬರಲ್ಲಿಯ ಈ ಘರ್ಷಣೆ ಸುಮಾರಾಗಿ ನನ್ನ ಸಂಸಾರಕ್ಕೆ ಹೊಸ ಬಣ್ಣ ಬಳಿಯಿತು. ಅಭಿಮಾನದ ಬೀಜ ಮರವಾಗಿ ಬೆಳೆಯಿತು. ನಾನೂ ಗಂಡಸು, ಮೇಲಾಗಿ ಪೋಲೀಸ ಇನ್ಸಪೆಕ್ಟರು. ನನ್ನಲ್ಲಿಯ ಅಭಿಮಾನ—

ಪ್ರೇಮದಿಂದ ಪ್ರೇಮ ಬೆಳೆಯುತ್ತದೆ. ಅದರಂತೆ ಅಭಿಮಾನದಿಂದ ಅಭಿಮಾನ ಬೆಳೆಯುತ್ತದೆ. ಆ ಅಭಿಮಾನ ನಮ್ಮಲ್ಲಿ ಅಹಂಕಾರಕ್ಕೆ ಎಡೆ ಮಾಡಿಕೊಟ್ಟಿತು.

ಕನ್ನಂಬಾಡಿಯ ಆಣೆಕಟ್ಟನ್ನು ನಾನೂ ನೀನೂ ಮೈಸೂರಿಗೆ ಹೋದಾಗ ನೋಡಲಿಕ್ಕೆ ಹೋಗಿದ್ದೆವು. ಆಗ ನಮ್ಮಿಬ್ಬರಲ್ಲಿ ನಡೆದ ಸಂಭಾಷಣೆ ನಿನಗೆ ಜ್ಞಾಪಕವಿದೆಯೋ ?

ನಾನು ಅಂದಿದ್ದೆ:

"ಕಾವೇರಮ್ಮ ಈ ಬದಿಯಲ್ಲಿ ಎಷ್ಟು ಸಿಟ್ಟಿಗೆದ್ದಿದ್ದಾಳೆ ನೋಡು."

"ಅದು ಹೇಗೆ?"

"ಅವಳ ಮಾರ್ಗದಲ್ಲಿ ಅಡೆತಡೆ ಮಾಡಿದ್ದಕ್ಕಾಗಿ ಕೋಪಿಸಿಕೊಂಡಿದ್ದಾಳೆ"

"ಕೋಪಿಸಿಕೊಂಡಾದರೂ ಏನು ಪ್ರಯೋಜನ?"

"ಪ್ರಯೋಜನವೇಕಿಲ್ಲ, ನೋಡು ಕಾವೇರಮ್ಮ ತನ್ನ ಸಹಸ್ರಾರು ಕೈಗಳಿಂದ ಆಣೆಕಟ್ಟಿಗೆ ಅಪ್ಪಳಿಸುತ್ತಿದ್ದಾಳೆ. ಆ ತೆರೆಗಳ ಭೋರ್ಗರೆಯುವ ಸಪ್ಪಳ ರುದ್ರತಾನದಂತೆ ಭಾಸವಾಗುತ್ತದೆ."

"ಆದರೆ ಆ ಬದಿ ನೋಡು. ಕಾವೇರಮ್ಮ ನಡುಹರೆಯದ ಸುಂದರ ತರುಣಿಯಂತೆ ಬಣ್ಣಬಣ್ಣದ ಸೀರೆಯುಟ್ಟು ನರ್ತನ ಮಾಡುತ್ತಿದ್ದಾಳೆ. ಕುಲು ಕುಲು ನಗುತ್ತಿದ್ದಾಳೆ. ಆ ಮೊದಲಿನ ಸಿಟ್ಟು ಅಹಂಕಾರ ಎಲ್ಲಿಯೋ ಮಾಯವಾಗಿದೆ."

"ಹೌದು. ಅದಕ್ಕೆ ಕಾರಣವೆಂದರೆ, ಹಾಕಿದ ಬಂಧನದಲ್ಲಿ ಹೊಸ ಮಾರ್ಗ ದೊರಕಿಸಿ ಮುಕ್ತಳಾಗಿದ್ದಾಳೆ. ಅದಕ್ಕೇ ಆ ನಲಿವು ಮತ್ತೆ ಕಾಣಿಸಿದೆ."

" —ಹುಚ್ಚು ಮಹಮ್ಮದ ತಘಲಕ ದೇಶದಲ್ಲಿಯ ಆರ್ಥಿಕ ಪರಿಸ್ಥಿತಿ ಗಂಭೀರವಾದಾಗ, ದುಡ್ಡು–ಆಣೆಗಳನ್ನೇ ರೂಪಾಯಿಗಳೆಂದು ತಿಳಿಯಬೇಕೆಂದು ಆಜ್ಞೆ ವಿಧಿಸಿದನು. ಇದರಿಂದ ಹೊರದೇಶದವರು ಈ ದೇಶಕ್ಕೆ ಬಂದು ಕೊಂಚ ಹಣದಲ್ಲಿ ಅಪಾರ ಸರಕನ್ನು ಮಾರಲಿಕ್ಕೆ ಕೊಂಡು ಹೊರಗೆ ಹೋಗಿ ಲಾಭ ಹೊಡೆಯಹತ್ತಿದರು............ "

ಇತಿಹಾಸದ ಕೆಲ ಸಾಲು ಕಿವಿಗೆ ಅಪ್ಪಳಿಸತೊಡಗಿತ್ತು. ನಿಂತಲ್ಲಿಯೇ ವಿಚಾರಿಸತೊಡಗಿದೆ. " ದ್ವಿಭಾರ್ಯಾ ಪ್ರತಿಬಂಧಕ " ಕಾಯಿದೆ, ಮಹಮ್ಮದ ತಘಲಕನ ಆರ್ಥಿಕ ಕಾಯಿದೆಯಂತೆ ಸ್ವರೂಪ ತಳೆದರೆ ........?

ಹಲ್ಲಿ ಲೊಟುಗುಟ್ಟಿತು. ಅಂಜಿದೆ. ಮನಸ್ಸಿಲ್ಲದ ಮನಸ್ಸಿನಿಂದ ಕೋರ್ಟಿನ ಕಡೆಗೆ ನಡೆದೆ.

---

# ವೈರಾಗ್ಯ—ವೈಯ್ಯಾರ.



ಅದೊಂದು ಚಿಕ್ಕ ಹಳ್ಳಿ. ಆ ಹಳ್ಳಿಯ ಹೆಸರು ಅಷ್ಟೊಂದು ಪ್ರಸಿದ್ಧಿ ಪಡೆಯದಿದ್ದರೂ, ಅಲ್ಲಿ ಕಂಡ ಒಂದು ವ್ಯಕ್ತಿ ಚಿತ್ರ ನನ್ನ ಕಣ್ಣಿನ ಮುಂದೆ ಕಟ್ಟಿ ಬಿಟ್ಟಿದೆ. ಅದನ್ನು ಅಳುಕಿಸಲೆತ್ನಿಸಿದಷ್ಟೂ ಅದು ನಿಚ್ಚಳವಾಗಹತ್ತಿದೆ —ಚಂದನದ ಕಟ್ಟಿಗೆಯ ಮೇಲೆ ಕೊರೆದ ಚಿತ್ರವನ್ನು ಹಲವಾರು ಸಲ ಅರಿವೆಯಿಂದ ತಿಕ್ಕಿದರೆ ?— ಹೊಸ ಮೆರುಗು ಬಂದು, ನೈ ನುಣುಪುಗೊಂಡು ನಿಚ್ಚಳವಾಗಿ ಕಾಣಿಸತೊಡಗುತ್ತದಲ್ಲವೇ ?

ನಮ್ಮ ತಂದೆಯವರು ಕನ್ನಡ ಸಾಲೆಯ ಮಾಸ್ತರರು. ಆ ಹಳ್ಳಿಗೆ ಅಕಸ್ಮಾತ್ತಾಗಿ ವರ್ಗವಾಯಿತು. ನಮಗೆ ಇಂಥದೇ ಊರಿರಲಿಲ್ಲ. ವರ್ಗವಾಗಿ ಹೋದ ಊರನ್ನೇ ನಮ್ಮದೆಂದು ಭಾವಿಸಿ ಆ ಊರವರೇ ಆಗಿ ಬಿಡುತ್ತಿದ್ದೆವು. ಆ ಹಳ್ಳಿಗೆ ಹೋದಾಗ ನಾನು ೧೫ ವರುಷದ ಬುದ್ಧಿ ಬಲಿಯದ ಹುಡುಗನಾಗಿದ್ದೆ. ನಾನು ಆಗ ಕಲಿಯುತ್ತಿದ್ದುದು ಕನ್ನಡ ೭ನೇ ಇಯತ್ತೆಯಲ್ಲಿ. ಸಮಾಜದಲ್ಲಿ ಸೂಕ್ಷ್ಮವಾಗಿ ಏಳುತ್ತಿರುವ ಜ್ವಾಲಾಮುಖಿಗಳ ಜಳಕ್ಕೆ ನನ್ನ ತಲೆ ಕೊಂಚ ಕಾಯುತ್ತಿದ್ದರೂ ಆದರ ಬಗ್ಗೆ ನಾಲ್ಕು ಮಾತುಗಳನ್ನಾಡುವ ಅಧಿಕಾರ ನನಗಿರಲಿಲ್ಲ. ನನ್ನದು ಮರವೆಯ ಸ್ವಭಾವವಾಗಿದ್ದರೆ, ಅಂದು ನಡೆದದ್ದರ ಬಗ್ಗೆ ಪುನಃರ್ವಿಮರ್ಶೆಯ ಪ್ರಸ್ತಾಪ ನನ್ನ ಮನದಲ್ಲಿ ಈಗ ಏಳುತ್ತಿರಲಿಲ್ಲ.

ನಾವಿದ್ದ ಆ ಹಳ್ಳಿಯ ಹೊರಗೆ, ೩-೩॥ ಫರ್ಲಾಂಗುಗಳ ಮೇಲೆ ದೊಡ್ಡ ಹಳ್ಳ ಹರಿಯುತ್ತಿದೆ. ಹನ್ನೆರಡು ತಿಂಗಳ ಕಾಲ ನೀರಿಗೆ ಕೊರತೆ ಇಲ್ಲ. ಆ ಹಳ್ಳ ದಾಟಿದರೆ ಮತ್ತೊಂದು ಹಳ್ಳಿ. ಅದು ಬೆಳಗಾವಿ ಜಿಲ್ಲೆಗೆ ಸೇರಿದ್ದು. ಹಳ್ಳದ ಈ ಬದಿಗೆ ಧಾರವಾಡ ಜಿಲ್ಲೆ. ಆ ಹಳ್ಳವೇ ಒಂದು ಗಡಿಯಾಗಿತ್ತು. ಅಣ್ಣ ತಮ್ಮಂದಿರಲ್ಲಿಯ ಸಖ್ಯವೇ ಈ ಎರಡೂ ಹಳ್ಳಿಗಳ

ಲ್ಲಿತ್ತು. ಅಭಿಮಾನದ ಮಟ್ಟ ಮೇಲೇರಿದಾಗ ಹ್ಯಾಂವಕ್ಕೆ ಹ್ಯಾಂವ ಹತ್ತಿ ಬಡಿದಾಟವಾಗಿ ಅಘಟಿತ ಘಟನೆಗಳು ಕಾಣಿಸಿಕೊಳ್ಳುತ್ತಿದ್ದವು. ಕೆಲವು ಸಲ ಅಂಥ ಘಟನೆಗಳನ್ನು ಮರೆತು ಕೈಯಲ್ಲಿ ಕೈಯಿಕ್ಕಿ ಕೂಡಿ ಕೆಲಸ ಮಾಡಿದ ಸಂದರ್ಭಗಳೂ ನನ್ನ ಜ್ಞಾಪಕದಲ್ಲಿದೆ ಅಂಥ ವೇಳೆಯಲ್ಲಿ ಕೆಲ ಸ್ವಾರ್ಥ ಸಾಧಕರು "ಎಷ್ಟs ಅಂದರೂ ಅಣ್ಣ ತಮ್ಮಂದಿರು ಕರಳು ಒಂದs. ನಾವೇನು ಹೊರಗಿನಿಂದ ಬಂದವರು" ಎಂದು ಮೂಗುಮುರಿಯುತ್ತ ಉಸುರುವ ಹೆಂಗಳೆಯರಂತೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿ ಉದಾಸೀನರಾಗುತ್ತಿದ್ದರು ಅವರ ಉದಾಸೀನತೆಗೆ ಕಾರಣವೆಂದರೆ, ಇಬ್ಬರ ಜಗಳದಲ್ಲಿ ತಮ್ಮ ಬೇಳೆ ಬೇಯದಿರುವದು

ನಾನೀಗ ಹೇಳಹೊರಟಿದ್ದು ಒಂದು ದೊಡ್ಡ ವ್ಯಕ್ತಿಯ ಕಥೆಯಲ್ಲ. ಪುಂಡರ ಪರಿಚಯವಲ್ಲ ಕಳ್ಳರ ಕಲಹವನ್ನಲ್ಲ ಸಾಮಾನ್ಯ ಜೀವಿಯೊಬ್ಬನ ಸ್ವಾರ್ಥರಹಿತ ಜೀವನ ನಡೆಸಿದ ಅಗಸರ ಗುಡದಪ್ಪನೇ ಆ ವ್ಯಕ್ತಿ.

ಆ ಊರಿಗೆ ನಾವು ಹೊಸದಾಗಿ ಹೋದ ಮೊದಲನೇ ದಿನವೇ ನಮ್ಮ ಮನೆಯವರೆಗೆ ಬಂದು ಸ್ವ–ಪರಿಚಯ ಕೋರಿದವನೆಂದರೆ ಅಗಸರ ಗುಡದಪ್ಪನೇ.

"ಯಾವ ಮಾಸ್ತರ ಬಂದರೂ ನಾನs ಅವರ ಅರಬಿ ಒಗ್ಯಾಂವಾ. ಹಿಂದಲಿನ ಮಾಸ್ತರರು ತಿಂಗಳಾ ಎಂಟಾಣೆ ಕೊಡತಿದ್ರು. ನಿಮಗೆ ತಿಳಿದಷ್ಟ ನೀವು ಕೊಡ್ರಿ" ಎಂದು ಹೇಳಿ, ಕೂಡಲು ಹೇಳದಿದ್ದರೂ ನಮ್ಮ ಮನೆ ಮುಂದಿನ ಕಟ್ಟೆಯಲ್ಲಿ ಗುಡದಪ್ಪ ಕುಳಿತುಬಿಟ್ಟನು.

ನಮ್ಮ ತಂದೆಯವರು ಮಾತನ್ನು ನಿಶ್ಚಯಿಸುವದಕ್ಕಾಗಿ ಅವನೊಡನೇ ಮಾತಿಗೆ ಮೊದಲು ಮಾಡಿದರು.

"ನೋಡು. ಮನ್ಯಾಗ ೫–೬ ಮಂದಿ ನಾವು. ಅವರೆಲ್ಲರ ಅರಿವೀನೂ ಒಗೀಬೇಕಾಗತೈತಿ, ಕಡಿಗೆ ತಕರಾರು ಮಾಡಬಾರದು ಮತ್ತ."

ಅದಕ್ಕೆ ಗುಡದಪ್ಪ ವಿನಂತಿಸುವ ಸ್ವರದಲ್ಲಿಯೇ "ಊರಾಗ ಒಗ್ಯಾಕ ಹತ್ತಿ ೮ ವರ್ಷ ಆತರಿ, ತಕರಾರು ಗಿಕರಾರು ಮಾತs ಕೇಳಬ್ಯಾಡ್ರಿ" ಎಂದು ಹೇಳಿ ಮಾತು ಮುಗಿಸಿ ನಡೆದುಬಿಟ್ಟ.

ಆ ಊರಿಗೆ ಬಂದು ಒಂದು ಯುಗಾದಿ ಕಳೆದು ಹೋಯಿತು. ಗುಡದಪ್ಪ ಈಗ ನಮ್ಮ ಮನೆಯವರಿಗೆಲ್ಲ ತೀರ ಪರಿಚಿತನಾಗಿ ಬಿಟ್ಟಿದ್ದಾನೆ. ಹರವಾದ ಹಣೆಯಮೇಲೆ ೭ ಮೊಳದ ಪಾವುಡ ಸುತ್ತಿಕೊಳ್ಳುವದು ಅವನ ರೂಢಿ. ಆದರೆ ಬೆನ್ನು ಸ್ವಲ್ಪ ಬಾಗಿಹೋಗಿತ್ತು. ಊರ ಹೊಲಸು ಬಟ್ಟೆಗಳನ್ನು ಹಸನು ಮಾಡಿಕೊಟ್ಟಿದರ ಪರಿಣಾಮವಾಗಿ ಬೆನ್ನು ಅರೆಬಾಗಿ ಹೋಗಿತ್ತು. ವಯಸ್ಸು ಬರೀ ಮೂವತ್ತೈದಾದರೂ, ಅವನ ಮುಖದ ಮೇಲೆ, ನೇಸರು ಪಡುವಣ ಕಿಳಿಯುವ ಕಾಂತಿ ಪಸರಿಸಿತ್ತು. ಗುಡದಪ್ಪ ಬರೀ ಅಗಸನಾಗಿರಲಿಲ್ಲ. ಓದುಗನಾಗಿದ್ದ. ಆಧ್ಯಾತ್ಮಿಕ ಕಥೆಗಳನ್ನು ಹೇಳುವದಕ್ಕೂ ಕೇಳುವದಕ್ಕೂ ತುಂಬಾ ಆಸಕ್ತಿ ಅವನಿಗೆ. ಅವನ ಪ್ರತಿ ಮಾತಿನಲ್ಲಿ ವೈರಾಗ್ಯರಸ ತುಂಬಿ ತುಳುಕುತ್ತಿತ್ತು. ಸಾಯಂಕಾಲ ಬಟ್ಟೆಗಳನ್ನು ಒಣಗಿಸಿ ಅವರವರ ಬಟ್ಟೆಗಳನ್ನು ಮನೆಗೆ ಮುಟ್ಟಿಸಿ ನೇರವಾಗಿ ನಮ್ಮ ಮನೆಗೆ ಬಂದು ಬಿಡುತ್ತಿದ್ದ. ನಮ್ಮ ಮನೆಗೆ ಬರುವುದಕ್ಕೆ ಮುಖ್ಯ ಕಾರಣವೆಂದರೆ, ಅಲ್ಲಿ ನಮ್ಮ ತಂದೆಯವರು ತರಿಸಿದ ವರ್ತಮಾನ ಪತ್ರಗಳನ್ನು ಓದುವದಕ್ಕೆ. ನಮ್ಮ ಮನೆಗೆ ಬಂದನಂತರ ನಾವು ಕೊಟ್ಟ ಚಹದ ಗುಟಕನ್ನು ಗುಟುಕರಿಸಿ, ಪೇಪರುಗಳನ್ನು ಓದಿ ಆಧ್ಯಾತ್ಮಿಕ ಕಥೆಗಳಿಗೆ ಸುರು ಮಾಡಿ ಬಿಡುತ್ತಿದ್ದ. ಅವನು ಸದಾ ಹೇಳುವ ಮಾತುಗಳೆಂದರೆ “ ಇಲ್ಲೇನೈತಿ, ಮೂರು ದಿನದ ಜಾತ್ರಿ. ಎಲ್ಲಾ ಮಾಡಿಸಾಂವಾ ಅಲ್ಲಿ ಕೂತಾನು. ಅದು ನಂದು, ಇದು ನಂದು ಎಂದು ಬಡಿದಾಡೋ ಬಂಟಿಗ ಅದನ್ನ ಒಯ್ಯಾಕ ಆಗತೈತೇನು ? ಮಾರಿ ಮಣ್ಣಾಗ ಅಡಗಿದ ಮ್ಯಾಗ ಅವಂದೇನೈತಿ, ಹಿಡಿಮಣ್ಣು ”

ವಾಕ್ಯದ ಕೊನೆಗೊಂದು, ದೀರ್ಘ ಶ್ವಾಸ ಬಿಡುತ್ತಿದ್ದನು.

ನಮ್ಮ ಮನೆಯಲ್ಲಿ ನಾನೊಬ್ಬ ಅವನ ನಿಕಟ ಪರಿಚಯದ ಗೆಳೆಯನಾಗಿ ಬಿಟ್ಟಿದ್ದೆ. ನನಗಾಗ ಕತೆಗಳನ್ನು ಕೇಳುವದರಲ್ಲಿ ಬಲು ಹುರುಪು. ಚಿಕ್ಕ ವಯಸ್ಸಿನಲ್ಲಿ ಹೀಗಾಗುವದು ಸ್ವಾಭಾವಿಕವಲ್ಲವೇ ? ಸಾಯಂಕಾಲ ಒಳ ಅಂಗಳದಲ್ಲಿ ಅವನನ್ನೆಳೆದುಕೊಂಡು ಹೋಗಿ ಕತೆ ಹೇಳುವದಕ್ಕಾಗಿ ಕೂಡಿಸಿಕೊಳ್ಳುತ್ತಿದ್ದೆ. ಅವನು ಕತೆ ಹೇಳುತ್ತಿರಬೇಕು, ನಾನು ಕೇಳುತ್ತಿರಬೇಕು. ಕತ್ತಲೆ ಮುಸುಕಿದರ ಪರಿವೆ ಇಬ್ಬರಿಗೂ ಆಗುತ್ತಿರಲಿಲ್ಲ. ಆಗ ಒಂದು ಹೆಣ್ಣು ಮುದುಕಿ ಬಂದು ಒಟಗುಡುತ್ತ ಗುಡದಪ್ಪನನ್ನು ಕರೆದುಕೊಂಡು

ಹೋಗಿಬಿಡುತ್ತಿದ್ದಳು. ಇದು ದಿನದ ರೂಢಿಯಾಗಿ ಹೋಗಿತ್ತು. ಅವನು ಹೇಳುತ್ತಿರುವ ವೈರಾಗ್ಯದ ಕತೆಗಳನ್ನು ಕೇಳಿ ನಾನು ಒಂದು ಸಲ—

"ನಿಂದು ಮದಿವಿ ಆಗ್ತೈತೇನು ಗುಡದಪ್ಪ" ಎಂದು ಕೇಳಿದ್ದೆ. ಅದಕ್ಕೆ ಪ್ರತಿಯಾಗಿ ಗುಡದಪ್ಪ "ನಮ್ದೇನೈತ್ರಿ" ಎಂದು ಉದಾಸೀನತೆಯಿಂದ ಹೇಳಿ ಬಿಟ್ಟಿದ್ದ.

ನಿಜವಾದ ವಿರಕ್ತ ವೇದಾಂತಿ ಎಂದು ಮನಸದಲ್ಲಿಯೇ ಅಂದುಕೊಂಡು ಅವನನ್ನು ಬೀಳ್ಕೊಟ್ಟೆ. ಆಗ ಗುಡುದಪ್ಪನ ಕಣ್ಣಲ್ಲಿ ಎರಡು ಹನಿಗಳು ಮೂಡಿದ್ದು ನನಗೆ ಕಂಡಿತ್ತು. ಈ ಮದುವೆಯ ಮಾತು ಕೇಳಿದ ಮುದುಕಿ ಅವನ ತಾಯಿ ನಿರಾಶೆಯ ಧ್ವನಿಯಲ್ಲಿ ಉತ್ತರಿಸಿದ್ದಳು.

"ಅಂವ ಏನು ಮುನಿ ಮಾಡಾಕ ಹುಟ್ಟ್ಯಾನೇನ್ರಿ? ಸನ್ಯಾಸಿ ಆಗಿ ಸಾಯಲಾಕ ಹುಟ್ಟೈತಿ ಬೇಬರ್ಸಿ."

ಒಮ್ಮೆ ಆ ಊರಲ್ಲಿ ಪ್ಲೇಗು ಹಾವಳಿ ಹಬ್ಬುವದರಲ್ಲಿತ್ತು. ಆಗ ಊರಲ್ಲಿ ಪ್ಲೇಗ ವ್ಯಾಕ್ಸಿನೇಟರು ಬಂದಿದ್ದರು. ಸಾಲೆಯ ಹುಡುಗರಿಗೆ ಅಂದು ಜಾತ್ರೆಯಾದಂತೇ ಆಗಿತ್ತು. ಪ್ಲೇಗಿನ ಇಂಜೆಕ್ಶನ್ ಚುಚ್ಚಿಸಿಕೊಳ್ಳುವದಕ್ಕೆ ನಮಗೆಲ್ಲರಿಗೂ ಚಾವಡಿಗೆ ಹೋಗಬೇಕಾಯಿತು. ನಾನಾಗ ಬಲು ಅಂಜು ಬುರುಕ. ಎಲ್ಲರೂ ಚುಚ್ಚಿಸಿಕೊಳ್ಳುವವರೆಗೆ ವ್ಯಾಕ್ಸಿನೇಟರರ ಕಣ್ಣು ಮರೆ ಯಾಗಿಯೇ ಉಳಿದೆ. ಆದರೇನು ನನ್ನ ಸರತಿ ಬರುವ ಹಾಗೆ ಬಂದೂ ಬಿಟ್ಟಿತು. ವ್ಯಾಕ್ಸಿನೇಟರರ ಕೈಯಲ್ಲಿ ಕೈಗೊಟ್ಟು ಕಣ್ಣುಮುಚ್ಚಿ ನಿಂತುಬಿಟ್ಟೆ. ನಿಮಿಷದಲ್ಲಿ ಚುಚ್ಚುವದೂ ಮುಗಿಯಿತು. ಹುಡುಗರೆಲ್ಲರ ಸರತಿ ಮುಗಿದ ನಂತರ, ಊರ ಹೆಂಗಸರೆಲ್ಲ ವ್ಯಾಕ್ಸಿನೇಶನ್ನಿಗಾಗಿ ಬಂದರು. ಅವರು ಒಬ್ಬೊ ಬ್ಬರಾಗಿಯೇ ಬಂದಿರಲಿಲ್ಲ, ಚಿಕ್ಕ ಮಕ್ಕಳೂ ಅವರನ್ನು ಹಿಂಬಾಲಿಸಿದ್ದವು. ವ್ಯಾಕ್ಸಿನೇಟರರು ಒಬ್ಬೊಬ್ಬರಿಗೆ ಮದ್ದನ್ನು ಚುಚ್ಚಿ, ಅವರ ಹೆಸರನ್ನೂ ಅವರ ಗಂಡಂದಿರ ಹೆಸರನ್ನೂ ಪದ್ಧತಿಯಂತೆ ರಜಿಷ್ಟರದಲ್ಲಿ ಬರೆದಿಟ್ಟುಕೊಳ್ಳುತ್ತಿದ್ದರು. ಕೊನೆಯವನಾಗಿ ಬಂದ ತಪ್ಪಿಗೇನೋ ಅವರು ಬರೆಯುವ ಕೆಲಸವನ್ನು ನನ

ಗೊಪ್ಪಿಸಿದರು. ಬರೆಯುವ ಕೆಲಸದಿಂದ ಬೇಸರ ಬರುತ್ತಿದ್ದರೂ ಅಲ್ಲಿಯ ದೃಶ್ಯದಿಂದ ನನ್ನ ಮನರಂಜನೆ ಮಾತ್ರ ಆಗುತ್ತಿತ್ತು. ಸಾಲುಸಾಲಾಗಿ ನಿಂತ ಹೆಣ್ಣುಮಕ್ಕಳು ಒಬ್ಬೊಬ್ಬರಾಗಿ ಬಂದು ಚುಚ್ಚಿಸಿಕೊಂಡ ತರುವಾಯ ವ್ಯಾಕ್ಸಿನೇಟರರು ಕೇಳುತ್ತಿದ್ದರು—

"ನಿನ್ನ ಹೆಸರು, ನಿನ್ನ ಗಂಡನ ಹೆಸರು ಹೇಳಿ ಬರೆಸಿ ಹೋಗು."

ಅದಕ್ಕೆ ಆ ಹೆಣ್ಣುಮಕ್ಕಳು ಹತ್ತತ್ತು ನಿಮಿಷ ತೊದಲುತ್ತ, ನಾಚುತ್ತ, ಮುಖವನ್ನು ಸೆರಗಿನಿಂದ ಮುಚ್ಚಿಕೊಳ್ಳುತ್ತ ತಮ್ಮ ಗಂಡಂದಿರ ಹೆಸರನ್ನು ಹೇಳಿ, ಹುಲಿಯ ಕೈಯಿಂದ ಒಮ್ಮೆ ಪಾರಾದವರಂತೆ ಒಮ್ಮೆಲೆ ನುಸುಳಿ ಪಾರಾಗುತ್ತಿದ್ದರು. ಅವರು ತಮ್ಮ ಗಂಡಂದಿರ ಹೆಸರನ್ನು ಹೇಳುವ ದೃಶ್ಯ ನನಗೆ ಮದುವೆಯ ಸಂಭ್ರಮದ ನೆನಪನ್ನು ತಂದು ಕೊಡುತ್ತಿತ್ತು.

ಹೀಗೆಯೇ ನನ್ನ ಕೈಗಳು ಬರೆಯುತ್ತಿರುವ ಕೆಲಸದಲ್ಲಿ ತೊಡಗಿದಾಗ—

"ನಡೀ ಮುಂದಕ ಎಲ್ಲವ್ವ, ಏಟ ನಾಚತಾಳ" ಎಂದು ಹೇಳುತ್ತಿರುವ ವಾಲೀಕಾರನ ಧ್ವನಿಯತ್ತ ನನ್ನ ದೃಷ್ಟಿ ಹೊರಳಿತು ಹೊರಳಿದಲ್ಲಿಯೇ ನನ್ನ ದೃಷ್ಟಿ ನಟ್ಟು ಹೋಯಿತು. ಅದಕ್ಕೊಂದು ವಿಶಿಷ್ಟವಾದ ಕಾರಣವೂ ಇತ್ತು.

ಕುಲುಕುಲು ಮುಗುಳು ನಗೆ ತೋರುತ್ತ, ಜಾರಿದ ಸೆರಗನ್ನು ಸರಿಪಡಿಸಿಕೊಳ್ಳದೇ ಆ ಎಲ್ಲವ್ವ ವಾಲೀಕಾರನ ಜತೆಯಲ್ಲಿ ಸರಸಸಲ್ಲಾಪಕ್ಕೆ ತೊಡಗಿದ್ದಳು ಎಲ್ಲವ್ವನ ನಂಬರು ನಿಂತ ಸಾಲಿನಲ್ಲಿ ಹತ್ತನೇಯದಾಗಿತ್ತು. ವ್ಯಾಕ್ಸಿನೇಟರರ ಲಕ್ಷವೆಲ್ಲ ಮುಂದೆ ಬಂದ ವ್ಯಕ್ತಿಗಳತ್ತ ಅಷ್ಟೇ ಇದ್ದಿತು. ಹತ್ತನೇ ನಂಬರಿನವರೆಗೆ ಅವರ ದೃಷ್ಟಿ ಮುಟ್ಟುತ್ತಿರಲಿಲ್ಲ. ನಾನು ಮಾತ್ರ ಕಳ್ಳಗಣ್ಣುಗಳಿಂದ ಕುತೂಹಲಿತನಾಗಿ ನೋಡುತ್ತಿದ್ದೆ.

ಆ ಎಲ್ಲವ್ವನ ಬೆಡಗು ಬಿನ್ನಾಣ ಆ ವೈಯ್ಯಾರ, ಅವಳು ವಾಲೀಕಾರನ ಜತೆಯಲ್ಲಿ ನಡೆಸಿದ ಕುಚೇಷ್ಟೆ, ಇವು ಹೆಚ್ಚಾದಂತೆ ನನ್ನ ಕುತೂಹಲ ಕೆರಳುತ್ತಿತ್ತು. ಅವರಿಬ್ಬರಲ್ಲಿಯೂ ಮಾತುಗಳು ನಡೆದಿದ್ದವು.

"ಊರಾಗ ಇದ್ದಾನೇನು ಮಾಂವ" ಎಂದು ವಾಲೀಕಾರ ಅವಳಿಗೆ ಕಣ್ಣು ಮಿಟುಕಿಸಿ ಗೇಲಿ ಮಾಡಿದ.

ಅದಕ್ಕೆ ಆ ಬಿನ್ನಾಣಗಿತ್ತಿ ಚೆಪ್ಪಾಗಿ ಪೆ "ವಾಂವ ಊರಾಗ ಇರ್ಲಿಕ್ಕರ ಏನಾತು ನೀ ಸತ್ತೀ ಏನು" ಎಂದು ತಿರೆಗಣ್ಣು ಮುಚ್ಚಿ ಮೆಲ್ಲನೇ ಹೇಳಿ ಮುಂದೆ ಬಂದುಬಿಟ್ಟಳು.

ಅವಳ ಒಯ್ಯಾರ, ಆ ಸಂಭಾಷಣೆ ನನಗೊಂದೂ ಅರ್ಥವಾಗಲಿಲ್ಲ ಆ ಬಗ್ಗೆ ಆಗ ಹೆಚ್ಚು ಪ್ರಸ್ತಾಪವೆತ್ತುವದೂ ನನ್ನ ಚಿಕ್ಕವಯಸ್ಸಿಗೆ ನಗೆಗೀಡು. ಮುಂದೆ ಎಲ್ಲರಂತೆ ವ್ಯಾಕ್ಸಿನೇಟರರು ಎಲ್ಲವ್ವನಿಗೂ ಅವಳನ್ನು ಹಿಂಬಾಲಿಸಿದ ೫ ಚಿಕ್ಕ ಮಕ್ಕಳಿಗೂ ಚುಚ್ಚಿ, "ನಿನ್ನ ಗಂಡನ ಹೆಸರನ್ನು ಬರಿಸು" ಎಂದು ಹೇಳಿ ನನ್ನ ಕಡೆಗೆ ಬಟ್ಟುಮಾಡಿ ತೋರಿಸಿದರು

ಆಗ ಎಲ್ಲವ್ವ ತೋರಿದ ಲಜ್ಜೆ ಆದೇ ಹೊಸದಾಗಿ ಮನೆಗೆ ಬಂದ ಮದು ವಣಗಿತ್ತಿಯನ್ನೂ ಮೀರಿಸುವಂತಹದಿತ್ತು. ಹೀಗೇ ಹತ್ತು ನಿಮಿಷಗಳು ಅವಳ ಲಜ್ಜೆಯಲ್ಲಿಯೇ ಕಳೆದುಹೋದವು.

"ಐವೈದು ಮಕ್ಕಳಾದವು, ಗಂಡನ ಹೆಸರು ಹೇಳಾಕ ಎಷ್ಟವ್ವ ನಾಚಿಕೆ" ಎಂದು ವ್ಯಾಕ್ಸಿನೇಟರರು ಗುಡುಗಿದರು. ಆದರೂ ನಿಷ್ಫಲವಾಯಿತು. ಕೊನೆಗೆ ಗತಿಗಾಣದ ವ್ಯಾಕ್ಸಿನೇಟರರು "ಏ ವಾಲಿಕಾರs, ನಿನಗ ಗೊತ್ತಿದ್ದರ ನೀನಾರು ಹೇಳೋ ಮಹರಾಯಾ" ಎಂದು ಒದರಿದಾಗ, ಆ ವಾಲೀಕಾರ ಮುಂದೆ ಬಂದು—

"ಅಗಸರ ಗುಡದಪ್ಪರಿ" ಎಂದು ಹೇಳಿದ.

ಕಾದ ಕೆಂಡದ ಮೇಲೆ ಕಾಲು ಬಿದ್ದಂತಾಯಿತು ನನಗೆ ಮೊದಲು ಅವನ ಮಾತು ನಿಜವೆನಿಸಲಿಲ್ಲ. ಆದರೂ ವ್ಯಾಕ್ಸಿನೇಟರರು ಹೇಳಿದಂತೆ ನನಗೆ ಆ ಕಾಗದದಲ್ಲಿ ಬರೆಯಲೇ ಬೇಕಿತ್ತು. ನಡುಗುವ ಕೈಗಳಿಂದಲೇ ಬರೆದೆ.

"ಎಲ್ಲವ್ವ ಕೋಂ ಗುಡದಪ್ಪ ಅಗಸರ" ಅದರ ಮೇಲೆ ಒತ್ತಿಕಾಗದನ್ನು ಒತ್ತಿದೆ. ಪುನಃ ಬರೆದದ್ದರ ಕಡೆಗೊಮ್ಮೆ ನೋಡಿದೆ.

ನನ್ನ ಒಳಗಣ್ಣುಗಳಿಗೆ ಅಲ್ಲಿ ಮಂಜುಮಂಜಾಗಿ ಕಾಣುತ್ತಿತ್ತು.

"ವೈಯ್ಯಾರ—ವೈರಾಗ್ಯ—" —ಒಂದು ಉತ್ತರ, ಇನ್ನೊಂದು ದಕ್ಷಿಣ. ಅವೆರಡರ ಸಂಗಮ ಸಾಧ್ಯವೇ?

ನಾನು ಎಚ್ಚರದಪ್ಪಿದವನಂತೆ ಆಗಿದ್ದೆ. ವ್ಯಾಕ್ಸಿನೇಟರರು ಅಲ್ಲಿಯ

ಕೆಲಸ ಮುಗಿಸಿ ಎದ್ದುಬಿಟ್ಟರು. ಕೊನೆಗೆ ನಾನು ಎಲ್ಲವ್ವನ ಬಗ್ಗೆ ಬರೆದದ್ದು ನಿಜವೇ ಎಂದು ವಾಲೀಕಾರನಿಗೆ ಕೇಳಿದೆ. ಅವನು "ಹೌದರೀ ರಾಯ್ರ, ಗಂಡನ ಹೆಸರು ಸುಳ್ಳು ಹೇಳತಾರೇನ್ರಿ" ಎಂದು ನಿಶ್ಚಯದ ಸ್ವರದಲ್ಲಿ ಹೇಳಿ ಹೊರಟುಹೋದ.

ಅಂದಿನಿಂದ ನಾನು ಗುಡದಪ್ಪನ ಜತೆಯಲ್ಲಿ ಹೆಚ್ಚು ಮಾತನ್ನು ಬೆಳೆಸುತ್ತಿರಲಿಲ್ಲ. ಮನೆ ಮಾಡಿ ಮಠಪತಿಯ ಮೆರಗನ್ನು ಬಳಕೊಂಡು ಮೋಸಗೊಳಿಸುವ ಮನುಷ್ಯನ ಜತೆಯಲ್ಲಿ ಮಾತೇಕೆ ಎಂದು ಮೌನ ತಾಳಿಬಿಟ್ಟೆ. ಅದಕ್ಕೂ ಹೆಚ್ಚಿನ ಆಶ್ಚರ್ಯವೆಂದರೆ, ಹಗಲು ಹನ್ನೆರಡು ತಾಸು ವೇದಾಂತ ಕೊಚ್ಚುವ ಕಲಿಭೀಷ್ಮ, ೫ ಮಕ್ಕಳ ತಂದೆಯಾಗಿದ್ದಾನಲ್ಲ ಎಂಬುದು. ಅಂತೂ ಅಂದಿನಿಂದ ಗುಡದಪ್ಪನ ಬಗ್ಗೆಯ ನನ್ನಲ್ಲಿಯ ಆದರ ಮಣ್ಣುಗೂಡಿ ಬಿಟ್ಟಿತು. ಆದರೆ ಗುಡದಪ್ಪನಲ್ಲಿ ಮಾತ್ರ ಯಾವ ಬದಲಾವಣೆಯೂ ಆಗಿರಲಿಲ್ಲ.

ಅದೇ ಮಾತು, ಅದೇ ನಯ, ಅದೇ ನಗು, ಅದೇ ನಿರ್ವಿಕಾರ ಕಳೆ ಮುಖದ ಮೇಲೆ ಹೊಳೆಯುತ್ತಿತ್ತು.

ಕೆಲ ಮಾಸಗಳುರುಳಿದವು. ಊರ ಹೊರಗೆಲ್ಲ ಜೋಳ ಆರಡಿ ಎತ್ತರವಾಗಿ ಮೆರೆಯುತ್ತಿತ್ತು. ಊರ ಪುಂಡರಿಗೆ ಅದೊಂದು ಮರೆ ಮಾಡಿಕೊಳ್ಳುವ ಮನೆ. ಹಳ್ಳಿಗರಿಗೆ ಸುಗ್ಗಿ ಮುಂದೆ ಇದ್ದರೂ, ಕಳ್ಳರಿಗೆ ಇದುವೇ ಸುಗ್ಗಿ ಕಾಲ.

ಒಂದು ಸೋಮವಾರ ನಸುಕು ಹರಿಯುವದರಲ್ಲಿತ್ತು. ಊರ ಮೂಲೆಯಲ್ಲೊಂದು ಆರ್ತಸ್ವರ ಕೇಳಬಂತು. ಜನರೆಲ್ಲ ಆ ಬದಿಗೆ ತಂಡತಂಡವಾಗಿ ಹೋಗತೊಡಗಿತು. ನಾನೂ ಅವರಲ್ಲೊಬ್ಬನಾಗಿದ್ದೆ.

ಪತ್ತಾರ ನಾಗಪ್ಪನ ಮನೆಗೆ ಕನ್ನ ಬಿದ್ದಿತ್ತು. ಕಳ್ಳರು ಹೊಡೆದ ಪೆಟ್ಟಿಗೆ ನಾಗಪ್ಪ ಎಚ್ಚರದಪ್ಪಿ ನೆಲಕ್ಕುರುಳಿ ನರಳುತ್ತಿದ್ದ. ಕೆಲ ಚಿನ್ನದ ಆಭ

ರಣಗಳು ಕಳುವಾಗಿದ್ದವು. ನಾಗಪ್ಪ ಪರಿಕ್ಷಿಸುತ್ತಿರುವಂತೆ ನಡುನಡುವೆ ಬಡ ಬಡಿಸುತ್ತಿದ್ದ.

"ಯಾರ ಒಯ್ದಾರ ನನಗ ಗೊತ್ತದ. ನಾ ಎಲ್ಲಾ ಗುರ್ತಾ ಹಿಡಿ ಬೇನಿ."

ಅಂದೇ ಮಧ್ಯಾಹ್ನದ ಹೊತ್ತಿಗೆ ಧಾರವಾಡದಿಂದ ಫೌಜದಾರರು, ಪೋಲೀಸರು ಬಂದರು.

ಪತ್ತಾರ ನಾಗಪ್ಪ 'ಕಾಶೀಮ'ನ ಬಗ್ಗೆ ಸಂದೇಹ ವ್ಯಕ್ತಪಡಿಸಿದ. ಕಾಶೀಮನನ್ನು ಚಾವಡಿಗೆ ಕರೆತರಲಾಯಿತು. ಪಾಟೀಲರ ಪರಿಚಯ ನನಗಿದ್ದುದರಿಂದ ತನಿಖೆಗೆ ಪ್ರಾರಂಭವಾದಾಗ ನಾನು ಚಾವಡಿಯಲ್ಲಿಯೇ ಕುಳಿತುಕೊಂಡೆ

ಕಾಶೀಮ ಕೆಳಗೆ ಮುಖ ಮಾಡಿ ನಿಂತುಕೊಂಡಿದ್ದ. ಫೌಜದಾರರು ಪಾಟೀಲರಿಗೆ ಕೇಳಹತ್ತಿದರು:

"ಹ್ಯಾಂಗರಿ ಮನುಷ್ಯ ಇವ?"

"ಊರಾಗ ಬಲು ಉಡಾಳರಿ."

"ಇವನ ಮನಿ, ಮಠ ಮಂದಿ ಯಾರಾದರೂ ಇದ್ದಾರೇನ್ರಿ?"

"ಎಲ್ಲಿದ ಬರಬೇಕ್ರಿ, ಆ ಅಗಸರ ಗಡದ್ಯಾನ ಹೆಂಡ್ತಿ ಎಲ್ಲಿಕನ್ನ ಇಟಕೊಂಡಾನರಿ."

"ಅಗಸರ ಎಲ್ಲಿಕನ್ನ, ಆಕ್ಯಾರು?"

"ಇದ್ದಾಳರೀ ಒಬ್ಬಾಕಿ, ಊರಾಗ ಹೆಸರು ಗಳಿಸಿದ್ದಾಕಿ, ಅಗಸರ ಗುಡದ್ಯಾ, ಪಾಪ ಸಜ್ಜನ ಮನಸ್ಯಾರಿ. ಇಂಥಾ ವೈಯ್ಯಾರಿ ಕೊಳ್ಳಾಗ ಬಿದ್ದ ಮ್ಯಾಗ, ಮದುವಿ ಆದ ಮೂರು ದಿನದಾಗ ಎಲ್ಲಿ ಗುಡದ್ಯಾನ್ನ ಬಿಟ್ಟಳು. ಅವನೂ ತನ್ನ ತಾಯಿನ್ನ ಕಟಕೊಂಡು ಬ್ಯಾರಿ ಆದನ್ರಿ. ಇದsಟು ನಡದ ಮ್ಯಾಗ ಎಲ್ಲೀಗೆ ಐದು ಮಕ್ಕಳಾದುವ್ರಿ. ಹೆಸರು ಹೇಳಲಿಕ್ಕೆ ಗಂಡ ಇದ್ದ ಮ್ಯಾಗ ಇನನ್ನಿ ಹತ್ತು ಹುಟ್ಟವಲ್ಲವು ಅಂತಾನ ಈ ಕಾಶೀಮ."

ಮಾತಿನ ಕೊನೆಯಾಗುತ್ತಲೂ ಫೌಜದಾರರ ಭರಮಪ್ಪ (ಬಾರುಕೋಲು) ಕಾಶೀಮನನ್ನು ಬಿಗಿದಪ್ಪಿತ್ತು.

ತನ್ನ—ಎಲ್ಲವ್ವನ ಸಂಬಂಧ ನಿಜವೆಂಬುದನ್ನು ಕಾಶೀಮ ಆರಕ್ಷಣದಲ್ಲಿ

ಒಪ್ಪಿಬಿಟ್ಟನು. ಆದರೆ ಫೌಜದಾರರಿಗೆ ಸಂಬಂಧದ ಒಪ್ಪಿಗೆ ಬೇಕಿರಲಿಲ್ಲ. ಕಳುವಿನ ಮೇಲೆ ಬೆಳಕು ಬಿಡಬೇಕಾಗಿತ್ತು.

ಬಾರುಕೋಲು ತನ್ನ ಕೆಲಸ ನಡಿಸಿಯೇ ಇತ್ತು. ಆದರೆ ನನಗೆ ಬೇಕಾದ ಉತ್ತರ ಆಗಲೇ ಸಿಕ್ಕಿ ಹೋಗಿತ್ತು ಹಾಗೇ ಚಾವಡಿಯಿಂದ ಹೊರಬಿದ್ದೆ ವಿಚಾರಿಸುತ್ತಲೇ ಮನೆಯತ್ತ ಹೊರಟೆ.

"ವೈಯ್ಯಾರ—ವೈರಾಗ್ಯ, ಸಂಗನು ಅಸಾಧ್ಯ." ಗುಡದಪ್ಪನಲ್ಲಿ ವೈರಾಗ್ಯದ ಬೀಜ ಮೊಳಕೆಯೊಡೆದಾಗ ವೈಯ್ಯಾರ ಅದಕೊಂದು ಪೆಟ್ಟು. ಎರಡೂ ಕೂಡಿ ಇರಬಯಸುವದು ಅಸಾಧ್ಯ.

ನಾನು ಇಷ್ಟು ದಿನಗಳ ವರೆಗೆ ಅವನನ್ನು ತಿರಸ್ಕರಿಸತೊಡಗಿದ್ದೆ ಅದಕ್ಕೆ ನಾನು ನನ್ನನ್ನೇ ನಿಂದಿಸಿದೆ. ಮನೆ ಮುಟ್ಟುವ ಮೊದಲೇ ಗುಡದಪ್ಪನ ತಾಯಿ ಆ ಹೆಣ್ಣು ಮುದುಕಿಯ ಸ್ಮಶಾನಯಾತ್ರೆ ಎದುರಾಯಿತು. ನಾನು ಆ ಜನಸಮೂಹವನ್ನೆಲ್ಲ ನೋಡಿದೆ ಆದರೆ ಅಂಥ ಪ್ರಸಂಗದಲ್ಲಿರಬೇಕಾದ ಗುಡದಪ್ಪ ಅಲ್ಲಿರಲಿಲ್ಲ

"ಗುಡದಪ್ಪನೆಲ್ಲಿ" ಎಂದು ನಾನು ಒಬ್ಬನನ್ನು ಕೇಳಿದೆ

"ಊರಲ್ಲಿಲ್ಲ" ಎಂದು ನನಗೆ ಉತ್ತರ ದೊರೆಯಿತು.

ಆ ಮಾತಿಗೆ ಇಂದು ಒಂದು ತಪ ಕಳೆದು ಹೋಗಿದೆ. ಆ ದಿನಿಂದ ಊರವರಿಗೆ ಕಣ್ಣುಮರೆಯಾದ ಗುಡದಪ್ಪ ಎಲ್ಲಿಯೋ ಯಾವದೋ ಸ್ವಾಮಿಗಳ ಸನ್ನಿಧಾನದಲ್ಲಿ ಶಿಷ್ಯನಾಗಿದ್ದಾನೆಂಬ ಸುದ್ದಿ.

ಅವನ ಜೀವನದ ಹೆಚ್ಚು ಪರಿಚಯವಿಲ್ಲದವರ ದೃಷ್ಟಿಯಲ್ಲಿ ಅವನು ಸಂಸಾರಿಯಾಗಿ ಸನ್ಯಾಸಿ. ನನ್ನ ದೃಷ್ಟಿಯಲ್ಲಿ ಮಾತ್ರ ಗುಡದಪ್ಪ ಮದುವೆಯ ಬಾಸಿಂಗದ ಜತೆಯಲ್ಲಿ ವೈರಾಗ್ಯದ ದೀಕ್ಷೆಯನ್ನು ಹೊಂದಿದ ಸನ್ಯಾಸಿ.

# ನಡುವಿನ ಪರದೆ.



ದ್ವಿತೀಯ ಮಹಾಯುದ್ಧ ಮುಕ್ತಾಯವಾದ ಕಾಲವದು. ಯುದ್ಧ ವೇನೋ ಮುಗಿದಿದ್ದರೂ, ಮಲಾಯಾದಲ್ಲಿಯ ಪರಿಸ್ಥಿತಿ ಮಾತ್ರ ತೀರ ಗಂಭೀರವಾಗಿತ್ತು. ಯುದ್ಧಕೈದಿಗಳೆಷ್ಟೋ ವಧಸ್ತಂಭವನ್ನೇರುತ್ತಿದ್ದ ಭೀಕರ ದೃಶ್ಯ ಅಲ್ಲಲ್ಲಿ ಕಾಣುತ್ತಿತ್ತು. ಆಹಾರ ಧಾನ್ಯಗಳ ಕೊರತೆಯೊಂದು ಕಡೆ ಈ ಹಗ್ಗದೆಳೆದಾಟದಲ್ಲಿ ಮಲಾಯಾ ನುಚ್ಚುನೂರಾಗುತ್ತಿತ್ತು.

ಮಲಾಯಾದ ರಾಜಧಾನಿಯಾದ ಕೋಲಾಲಂಪೂರದ 72 I. G. H (ಇಂಡಿಯನ್ ಜನರಲ್ ಹಾಸ್ಪಿಟಲ್) ನಲ್ಲಿ 'A' ವಾರ್ಡಿನಲ್ಲಿ, ಕ್ಯಾಪ್ಟನ್ ರಾಮನ್ ನಾಯರ್ ತಮ್ಮ ಮಂಚದಮೇಲೆ ಅಸ್ವಸ್ಥಚಿತ್ತರಾಗಿ ಕುಳಿತಿದ್ದರು. ಅದೇ ಆಗಲೇ ಡಾಕ್ಟರರು ಬಂದು ಅವರ ನಾಡಿಯನ್ನು ಪರೀಕ್ಷಿಸಿ, ಹಾಸ್ಪಿಟಲಿನಿಂದ ನಾಳೆ ಬಿಡುಗಡೆಯಾಗುವ ವಿಚಾರ ತಿಳಿಸಿ ಹೋಗಿದ್ದರು. ಜ್ವರದಿಂದ ಮುಕ್ತರಾದಾಗ ಜನರಿಗೆಲ್ಲ ಆನಂದವಾಗುತ್ತದೆ. ಆದರೆ ರಾಮನ್ ನಾಯರರಿಗೆ ಮಾತ್ರ ಬೇಜಾರವಾಯಿತು. ಅವರಿಗೆ ಹಾಸ್ಪಿಟಲ್ ಬಿಡುವ ಮನಸ್ಸೇ ಇರಲಿಲ್ಲ. ಮರುಳುಗಾಡಿನಲ್ಲಿ ಇರುಳೂ ಹಗಲೂ ನಡೆಯುವವನಿಗೆ ಎಲ್ಲಿಯೊ ತಣ್ಣೀರ ಸೆಲೆ ಸಿಕ್ಕಷ್ಟು ಆನಂದ, ರಾಮನ್ ನಾಯರರಿಗೆ ಹಾಸ್ಪಿಟಲಿನಲ್ಲಿ ಆಗಿತ್ತು. ಆದರೆ, ಆಗ ತಾನೆ ಡಾಕ್ಟರರು ತಿಳಿಸಿದ ಬಿಡುಗಡೆಯ ಸುದ್ದಿ. ಅವರ ಕರುಳನ್ನೇ ಕತ್ತರಿಸಿ ಬಿಟ್ಟಿತ್ತು. ಯಕ್ಷನನ್ನು ಅವನ ಪ್ರಿಯತಮೆಯಿಂದ ದೂರ ಮಾಡಿದ ಪಾಪದಷ್ಟು ದೊಡ್ಡ ದೋಷವನ್ನು ರಾಮನ್‌ರು—ಮನಸ್ಸಿನಲ್ಲಿಯೇ—ಡಾಕ್ಟರರ ಮೇಲೆ ಹೊರಿಸಿದರು. ಇದೇ ವಿಚಾರಗಳ

ಗೊಂದಲದಲ್ಲಿ ಸಿಲುಕಿದಾಗಲೇ, ಎದುರು ಗೋಡೆಯ ಮೇಲಿನ ಗಡಿಯಾರ 'ಢಣ್' ಎಂದು ಗಂಟೆ ಬಾರಿಸಿ, ತನ್ನ ಕರ್ತವ್ಯ ನೆರವೇರಿಸಿತು.

ಆ ಸಪ್ಪಳದಿಂದ ನಾಯರರಿಗೆ ಮತ್ತಷ್ಟು ನೋವಾಯಿತು. 'ಡಾಕ್ಟರ ರಂತೆಯೆ ಈ ಯಂತ್ರವೂ ಕಠೋರವಾಗಿದೆಯೋ?' ಎಂದಂದುಕೊಂಡರು. "ಅಬ್ಬಾ! ಆರುವರೆ ಗಂಟೆ. ಇನ್ನು ಕೇವಲ ೧೪ ತಾಸುಗಳಷ್ಟೇ ಇಲ್ಲಿರುವುದು. ಅಷ್ಟೇ ಸಹವಾಸ!" ಎಂದು ದೀರ್ಘಶ್ವಾಸ ಬಿಟ್ಟು, ಮಂಚದಿಂದ ಕೆಳಗಿಳಿಯುವ ಮೊದಲೇ, ಅವರ ಮನಸೆಳೆದ ನರ್ಸ್ ಜಾನಕೀ ಮೆನನ್ ಒಳಗೆ ಬಂದಳು. ಅವಳು ಬಂದುದನ್ನು ನೋಡಿ ರಾಮನ್, ತಮ್ಮ ಕಾಲುಗಳನ್ನು ಮತ್ತೆ ಮಂಚದ ಮೇಲೆಳೆದುಕೊಂಡರು. ಜಾನಕಿ ಒಳಗೆ ಬಂದವಳೇ, ರಾಮನ್‌ರ ಹಿಸ್ಟರೀ ಶೀಟನ್ನು ಕೈಯಲ್ಲಿ ತೆಗೆದುಕೊಂಡು, ಬಾಟ್ಲಿಯಿಂದ ಗ್ಲಾಸಿನಲ್ಲಿ ಔಷಧ ಸುರಿದು, ಅದನ್ನು ರಾಮನ್‌ರ ಕೈಯಲ್ಲಿಕೊಡುತ್ತ ನಗುಮುಖದಿಂದ "ತೆಗೆದುಕೊಳ್ಳಿ! ಈಗ ತುಂಬಾ ಹುಶಾರಿಯಾಗಿದ್ದೀರಿ!" ಎಂದು ಹೇಳಿ, ಅವರ ಹಿಸ್ಟರೀ ಶೀಟನ್ನು ತುಂಬಲು ತೊಡಗಿದಳು. ರಾಮನ್‌ರು ಮಾತ್ರ ಕೈಯಲ್ಲಿ ಗ್ಲಾಸನ್ನು ಹಿಡಿದುಕೊಂಡು ಮೌನರಾಗಿ ಅವಳನ್ನೇ ದೃಷ್ಟಿಸಹತ್ತಿದರು.

ದುಂಡು ಮುಖ, ಕೊರೆದ ಕಣ್ಣು, ಹಳದಿ ಕೂಡಿದ ಬಿಳಿಯ ಮೈಬಣ್ಣ, ಉಂಗುರುಗೂದಲು, ಪುಷ್ಟ ಎದೆ, ಬ್ರಹ್ಮ ಪ್ರಮಾಣಬದ್ಧ ಪಡಿಯಚ್ಚಿನಲ್ಲಿ ಎರಕ ಹೊಯ್ದ ಸೌಂದರ್ಯದ ಗೊಂಬೆಯಾಗಿದ್ದಳು ಜಾನಕಿ ಜಾನಕಿಯಲ್ಲಿಯ ಈ ನಿಸರ್ಗದತ್ತ ಸೌಂದರ್ಯ, ರಾಮನ್‌ರ ದೃಷ್ಟಿಯನ್ನು ಬೇರೆ ಕಡೆಗೆ ಸರಿಸಲು ಆಸ್ಪದ ಕೊಡಲಿಲ್ಲ. "ಅಯ್ಯೋ! ಇಂಥವಳ ಜತೆಯಲ್ಲಿ ಕೇವಲ ೧೪ ತಾಸುಗಳಷ್ಟೇ ಅವಧಿಯ ಸಹವಾಸವೇ?" ಎಂದು ಮರುಗಿದರು.

ಜಾನಕಿ ತನ್ನ ಕೆಲಸ ಮುಗಿಸಿ ರಾಮನ್‌ರತ್ತ ನೋಡಿದಳು. ಕೈಯಲ್ಲಿಯ ಗ್ಲಾಸು ಹಾಗೆಯೆ ಇದೆ. ಮುಖದಲ್ಲಿ ಉದಾಸೀನತೆ ಎದ್ದು ಕಾಣುತ್ತದೆ. ತನ್ನನ್ನೇ ನೋಡುತ್ತಿದ್ದಾರೆ. ಅವಳಿಗೇಕೋ ರಾಮನ್‌ರ ಇಂದಿನ ಸ್ಥಿತಿಯನ್ನು ನೋಡಿ ತುಂಬ ಆಶ್ಚರ್ಯವಾಯಿತು. 'ನಿತ್ಯವೂ ನಗುಮುಖದಿಂದ ಔಷಧಿ ಕುಡಿಯುವವರು, ಇಂದೇಕೆ ಹೀಗೆ?'—ಎಂದು ಯೋಚಿಸಿದಳು.

ಮುಂದೆ ತಾನೇ ತನ್ನ ಕೈಗಳಿಂದ, ಬಲುವೆ ಮಾಡಿ ರಾಮನ್‌ರಿಗೆ ಔಷಧ ಕುಡಿಸಿದಳು. ಸನಿಯದ ಖುರ್ಚಿಯನ್ನು ಬದಿಯಲ್ಲಿಯೇ ಸರಿಸಿ ಕುಳಿತುಕೊಳ್ಳುತ್ತ ಕೇಳಿದಳು:

"ಏಕೆ? ಇಂದೇಕೆ ಹೀಗೆ ಮಾಡುತ್ತಿದ್ದೀರಿ?" "ಮನಸ್ಸಿನಲ್ಲಿದ್ದುದನ್ನು ಈಗ ಹೇಳಿಬಿಡಲೇ?" ಎಂದು ರಾಮನ್ ಒಂದು ಸಲ ಯೋಚಿಸಿದರು. ಆದರೆ ತಾನು ಕ್ಯಾಪ್ಟನ್! ಈ ನರ್ಸ್ ಒಂದು ವೇಳೆ ಒಪ್ಪದಿದ್ದರೆ, ತನ್ನ ಗೌರವಕ್ಕೆ ಧಕ್ಕೆ! ಏನಾದರೂ ಉತ್ತರ ಕೊಡಲೇಬೇಕಲ್ಲವೆಂದು ರಾಮನ್‌ರು ಉತ್ತರಿಸಿದರು:

"ನಾಳೆ ಬೆಳಗ್ಗೆ ೮ ಗಂಟೆಗೆ, ಡಾಕ್ಟರರು ನನ್ನನ್ನು ಬಿಡುಗಡೆ ಮಾಡುತ್ತಾರೆ. ಈಗೇನೋ— ನಾನು ಪೂರ್ಣ ಗುಣಮುಖವಾಗಿದ್ದೇನಂತೆ!"

"ಥ್ಯಾಂಕ್ಸ್ ಗಾಡ್! ಅಭಿನಂದನೆಗಳು! ನೋಡಿ, ಇದು ನನ್ನ ಕೈ ಗುಣ. ನನ್ನ ಉಪಚಾರವೇ ನಿಮ್ಮನ್ನಿಷ್ಟು ಬೇಗ ವಾಸಿ ಮಾಡಿತು." ನಗುತ್ತಲೇ ಜಾನಕಿ ಇವೆಲ್ಲ ಮಾತುಗಳನ್ನು ನುಡಿದುಬಿಟ್ಟಳು. ಅವಳ ಕಣ್ಣುಗಳಲ್ಲಿ ಸಂತೋಷ ಕುಣಿಯುತ್ತಿತ್ತು. ಆಗಿನ ಅವಳ ಮುಖಚರ್ಯೆ ನೋಡಿ ರಾಮನ್ ಭೂಮಿಗೆ ಕುಸಿದು ಬಿದ್ದರು. "ನಾನು ಅಪೇಕ್ಷಿಸಿದ ಪ್ರತಿಕ್ರಿಯೆಗೂ ಇದಕ್ಕೂ ಏನೂ ಸಂಬಂಧವಿಲ್ಲವಲ್ಲಾ! ನಾನು ದೂರವಾಗುತ್ತಿದ್ದೇನೆ ಎಂಬುದನ್ನು ಕೇಳಿ, ಇವಳು ವ್ಯಸನಪಡಬಹುದೆಂದು ತಿಳಿದಿದ್ದೆ. ಛಿ! ಸ್ತ್ರೀಯರೆಲ್ಲ ಕಪಟಿಗಳೇನೋ!" ಎಂದು ವಿಚಾರಿಸುತ್ತಲೇ ರಾಮನ್:

"ಸರಿ, ನೀನು ನನ್ನ ಉಪಚಾರ ತುಂಬ ಮಾಡಿದ್ದೀ. ನಿನಗೇನಾದರೂ ಪ್ರತಿಫಲ ನಾನು ಕೊಡಲೇ ಬೇಕು. ಹೇಳು ಏನು ಬೇಕು? ಮತ್ತೆ ನಿನ್ನ—ನನ್ನ ಭೆಟ್ಟಿ ಎಂದೋ—" ಜಾನಕಿ ತತ್‌ಕ್ಷಣ ರಾಮನ್‌ರ ಬಾಯಿ ಮೇಲೆ ಕೈ ಇರಿಸುತ್ತ ಉತ್ತರಿಸಿದಳು:

"ಹಾಂ, ಹಾಗೆ ಹೇಳಬೇಡಿ! ಆಶೆ ಅಮರವಾಗಿದೆ. ನಿಮ್ಮಿಂದ ನಾನು ಯಾವ ಪ್ರತಿಫಲದ ಅಪೇಕ್ಷೆಯನ್ನೂ ಮಾಡುವುದಿಲ್ಲ. ಮೇಲಾಗಿ ನೀವು ನನ್ನ ಪ್ರಾಂತದವರೇ! ನಿಮ್ಮ ಬಗ್ಗೆ ನನಗೆ ಸ್ವಕೀಯ ಭಾವನೆ ಉತ್ಪನ್ನವಾಗಿದೆ."

ಜಾನಕಿಯ ಕೊನೆಯ ಮಾತುಗಳಿಂದ ರಾಮನ್‌ರಿಗೆ ತಡೆಯಲಾಗಲಿಲ್ಲ. ಇಲ್ಲಿಯ ವರೆಗಿನ ತಮ್ಮ ಜೀವಮಾನದಲ್ಲಿ ಹೆಣ್ಣಿನ ಸಂಬಂಧವನ್ನೇ ಅರಿಯದ ರಾಮನ್, ಆ ಮಾತುಗಳಿಂದ, ತಮ್ಮನ್ನು ತಾವೇ ಮರೆತು ಹೋದರು. ಜಾನಕಿಯ "ಸ್ವಕೀಯ ಭಾವನೆ" ಈ ಶಬ್ದದ ಜತೆಯಲ್ಲಿ ಮಂಚದಿಂದೆದ್ದು ಜಾನಕಿಯನ್ನು ಬರಸೆಳೆದು ಬಿಗಿದಪ್ಪಿ ಮುದ್ದಿಸಿಬಿಟ್ಟರು. ಸ್ವೈನಿಕವೃತ್ತಿಯ ಸಂಯಮನರಹಿತ ನಿರ್ಭೀತ ಜೀವಿ!

ಒಂದು ಕ್ಷಣದಲ್ಲಿ ಏನೋ ಭೂಕಂಪವಾದಂತಾಯಿತು ರಾಮನ್‌ರ ತೋಳಸೆರೆಯಿಂದ ತಪ್ಪಿಸಿಕೊಂಡ ಜಾನಕಿ, ಕೆಂಪಾಗಿ ಹೋಗಿದ್ದಳು. ಅವಳ ತುಟಿ ಥಳಥರ ನಡುಗುತ್ತಿದ್ದುವು. ಅವಳು ಏನನ್ನೋ ಹೇಳಬಯಸುತ್ತಿದ್ದಳು; ಆದರೆ ಮಾತನಾಡಲಾಗಲಿಲ್ಲ. ಒಂದು ತೀಕ್ಷ್ಣದೃಷ್ಟಿಯನ್ನು ರಾಮನ್‌ರತ್ತ ಬೀರಿ, ಮಿಂಚಿನ ವೇಗದಿಂದ ಕೋಣೆಯಿಂದ ಮಾಯವಾದಳು.

ರಾಮನ್‌ರಿಗೆ ಒಂದು ಕ್ಷಣ ಏನೂ ತಿಳಿಯದಾಯಿತು. ತಾನು ಅವಳ ಬಗ್ಗೆ ತಪ್ಪು ಅರ್ಥ ಮಾಡಿಕೊಂಡೆನೆ? ಛೇ! ನನ್ನಲ್ಲಿ ತಮ್ಮ ಬಗ್ಗೆ ಸ್ವಕೀಯ ಭಾವನೆ ಹುಟ್ಟಿದೆ ಎಂದು ಹೇಳುವಾಗ, ಅವಳು ತನ್ನ ಕಡೆಗೆ ಪ್ರೇಮಪೂರ್ಣ ಕಟಾಕ್ಷವನ್ನು ಬೀರಲಿಲ್ಲವೇ? ಹಾಗಾದರೆ....ಕೋಪಿಸಿಕೊಂಡು ಹೊರಟು ಹೋದಳೇಕೆ? ಇರಬಹುದು, ವೇಳೆ ಕಾಲ ನೋಡದೆ ತಾನು ಅವಳನ್ನು ಚುಂಬಿಸಿದೆನೆಂದು ಇರಬಹುದು. ಆದರೆ ಅವಳು ತನ್ನನ್ನು ಪ್ರೇಮಿಸುತ್ತಾಳೆ. ಇಲ್ಲವಾದರೆ ತನ್ನನ್ನು ಈ ಪರಿಯಾಗಿ ೨೧ ದಿನ ಹಗಲು ರಾತ್ರಿ ಉಪಚರಿಸುತ್ತಿರಲಿಲ್ಲ—" ಎಂದು ತಮ್ಮಷ್ಟಕ್ಕೆ ತಾವೇ ಸಮಾಧಾನ ಮಾಡಿಕೊಳ್ಳಲು ಹವಣಿಸಿದರು.

ನಿಂತುಕೊಂಡೇ ವಿಚಾರ ಮಾಡುತ್ತಿದ್ದ ರಾಮನ್ ಒಂದು ದೀರ್ಘಶ್ವಾಸ ಬಿಟ್ಟು, ಮಂಚದ ಮೇಲೆ ಪವಡಿಸಿದರು. ಮತ್ತೆ ಗೋಡೆಯ ಮೇಲಿದ್ದ ಗಡಿಯಾರ ಗಂಟೆಯನ್ನು ಬಾರಿಸಿತು. ರಾಮನ್‌ರ ಮೈ ಮತ್ತೆ ಬೆವರಿತು. ತಮ್ಮ ಬಿಡುಗಡೆಯ ವೇಳೆಯನ್ನು ನಿರೀಕ್ಷಿಸುತ್ತ, ನಿದ್ರೆ ಬಾರದಿದ್ದರೂ ಕಣ್ಣನ್ನು ಮುಚ್ಚಿಕೊಂಡೇ ಮಲಗಿದರು.

ಕ್ಯಾಪ್ಟನ್ ರಾಮನ್ ನಾಯರ್, ಬಾಥೂ ರೋಡಿನಲ್ಲಿಯ ತಮ್ಮ ಕ್ವಾರ್ಟರ್ಸ್‌ದಲ್ಲಿ ಉದಾಸ ಚಿತ್ತರಾಗಿ ಶತಪಥ ಹಾಕುತ್ತಿದ್ದರು. ಹಾಸ್ಪಿಟಲಿನಿಂದ ಹೊರಬಂದು ಎರಡು ದಿನಗಳಾಗಿದ್ದರೂ, ಅವರಿಗೆ ಹೊಸ ವಾತಾವರಣ ಅಷ್ಟು ಬೇಗ ಹಿಡಿಯಲಿಲ್ಲ. ಕೋಣೆಯಲ್ಲಿ ಇನ್ನೂ ಶತಪಥ ನಡೆದೇ ಇತ್ತು. ಮಿಲ್ಟ್ರೀ ಬೂಟ್ಸಿನ ಖಣ್ ಖಣ್ ಸಪ್ಪಳವಷ್ಟೇ, ಶಬ್ದವಾಗಿ ಶಾಂತತೆಯನ್ನು ಕೆಡಿಸುತ್ತಿತ್ತು. ರಾಮನ್‌ರಿಗೆ ತಮ್ಮ ಹೃದಯದ ಮೇಲೆ, ಕನ್ನ ಕೊರೆವ ಕಳ್ಳ ಹಾರೆಕೋಲಿನಿಂದ ಬಡಿದಂತೆ—ಆ ಶಬ್ದ ಭಾಸವಾಗುತ್ತಿತ್ತು. ನಡೆದಾಡುತ್ತಿರುವಂತೆಯೆ ರಾಮನ್ ತಮ್ಮ ಬಲದ ಕಿಸೆಯಿಂದ ಪ್ಲೇಯರ್ಸ್ ನೇವ್ಹಿ ಕಟ್ ತೆಗೆದು ಬಾಯಲ್ಲಿರಿಸಿ, ಹೊಗೆಯಾಡಿಸತೊಡಗಿದರು. ಕೋಣೆಯ ತುಂಬೆಲ್ಲ ಹೊಗೆ ತುಂಬತೊಡಗಿತ್ತು. ಅದೇ ಆಗ ಜಾನಕಿಯಿಂದ ಬಂದ ಪತ್ರವಂತೂ, ರಾಮನ್‌ರ ಒಳಹೃದಯದಲ್ಲಿ ಪ್ರಚಂಡ ಹೊಗೆ ಎಬ್ಬಿಸಿಬಿಟ್ಟಿತ್ತು. ರಾಮನ್‌ರು ಮತ್ತೊಮ್ಮೆ ಆ ಪತ್ರವನ್ನು ಓದಲುತೊಡಗಿದರು.

72 I. G. H,
Kaula Lumpur,

"ಕ್ಯಾ. ರಾಮನ್ ನಾಯರರಿಗೆ—

ವಂದನೆಗಳು. ತಾವು ಹಾಸ್ಪಿಟಲಿನಿಂದ ಬಿಡುಗಡೆಯಾಗಿ ಹೋಗುವಾಗ, ನಾನು ತಮ್ಮನ್ನು ಕಾಣಲಿಲ್ಲ. ಕಾಣಲಿಕ್ಕೇಕೋ ಮನಸ್ಸು ಹಿಂಜರಿಯಿತು. ನೀವು ನನ್ನನ್ನು ಚುಂಬಿಸಿದಿರಿ. ಸ್ನಾನ ಮಾಡದೆ ದೇವರನ್ನು ಮುಟ್ಟುವುದು ಪಾಪವೆಂದೇ ನನ್ನ ಭಾವನೆ. ನಾನೂ ಹೆಣ್ಣು. ಈಗಿರುವ ನನ್ನ ಬಾಳು ಅಪೂರ್ಣವೆಂಬುದು ನನಗೆ ಗೊತ್ತಿದೆ. ನನಗೂ ಮದುವೆಯಾಗಬೇಕೆಂಬ ಹಂಬಲವಿದೆ. ಸುಖವಾಗಿ ಸಂಸಾರ ಸಾಗಿಸಬೇಕೆಂಬ ಸ್ವಪ್ನವನ್ನೂ ಕಾಣುತ್ತಲಿದ್ದೇನೆ.

ಆದರೆ ನನ್ನ ಇತಿಹಾಸದ ಹಿನ್ನೆಲೆ ತುಂಬ ಗಂಭೀರವಾಗಿದೆ. ಅದರ ಪರಿಣಾಮವಾಗಿಯೇ ನಾನು ನರ್ಸ್‌ವೃತ್ತಿಯನ್ನು ಕೈಕೊಂಡೆ. ಈ ಐದು ವರ್ಷಗಳ ನರ್ಸ್‌ವೃತ್ತಿಯಲ್ಲಿ, ನನಗೆ ಕೆಲಸದಲ್ಲಿ ಸಂಬಂಧಬರುತ್ತಿದ್ದ ಗಂಡಸರನ್ನೆಲ್ಲ ನಾನು ಪರೀಕ್ಷಿಸುತ್ತಿದ್ದೆ. ಎಲ್ಲರೂ ನನ್ನ ಸೌಂದರ್ಯವನ್ನು ಕೊಂಡಾ

ಡುತ್ತಿದ್ದರು. ಎಲ್ಲರೂ ಕೇವಲ ಭ್ರಮರವೃತ್ತಿಯವರಾಗಿಯೆ ಕಂಡರು. ಈ ನರ್ಸ್‌ವೃತ್ತಿಯನ್ನು ನಾನು ಬಹಳೇ ಜಾಗ್ರತೆಯಿಂದ ನಡೆಸಿಕೊಂಡು ಬಂದಿದ್ದೇನೆ ಯಾರಿಗೂ ನನ್ನ ಮೈಯನ್ನು ಮುಟ್ಟಲು ಅವಕಾಶ ಕೊಡಲಿಲ್ಲ. ಈ ನನ್ನ ಕಟ್ಟಳೆಯನ್ನು ಮೀರಿದವರು ನೀವೇ. ಮೇಲಧಿಕಾರಿಗಳ ಬಳಿ ಹೋಗಿ ಈ ನಿಮ್ಮ ಕೃತಿಯನ್ನು ದೂರಬಹುದಾಗಿತ್ತು ಆದರೆ ನಿಮ್ಮ ಬಗ್ಗೆ ನನ್ನಲ್ಲಿ ಬೆಳೆದ ಆತ್ಮೀಯ ಭಾವನೆ, ನನಗೆ ಹಾಗೆ ಮಾಡಿಸಗೊಡಲಿಲ್ಲ. ನನ್ನ ದುರ್ಬಲತೆಯನ್ನು ನಾನು ಹಳಿದುಕೊಂಡರೂ, ಒಂದು ಮನಸ್ಸು ಮಾತ್ರ 'ಭಲೇ' ಎಂದು ಹೇಳಿತು. ತಮ್ಮ ಜತೆಯಲ್ಲಿ ಮದುವೆಯಾಗಲು ನಾನೂ ಹಾತೊರೆಯುತ್ತಿದ್ದೇನೆ ಆದರೂ ಪ್ರೇಮವಿವಾಹವಾಗುವ ಮೊದಲು, ಇಬ್ಬರೂ ಪರಸ್ಪರರು ಪರಸ್ಪರರನ್ನು ಅರಿಯಬೇಕು. ಇಲ್ಲವಾದರೆ—

ಪ್ರತಿಯೊಬ್ಬರ ಜೀವನ ಏನೂ ಅಡೆ–ತಡೆ ಇಲ್ಲದೆ ನಡೆಯುವುದು ಅಸಾಧ್ಯ. ಕೆಲ–ಕೆಲವರ ಜೀವನದಲ್ಲಿ ತುಂಬ ದುರ್ಗಮ ಮಾರ್ಗಗಳು ಬರುತ್ತವೆ. ನಾನೂ ನಿಮ್ಮೂರಿನವಳೇ. ಟ್ರಿಚ್ಚಿಯಲ್ಲಿ ಕ್ಯಾಂಟೋನ್‌ಮೆಂಟಿನ ಬೀದಿಯಲ್ಲಿಯೇ ನಮ್ಮ ಮನೆ. ಒಂದೇ ಊರವರಾದುದರಿಂದ, ನಡೆದುಹೋದ ಮಾತನ್ನು ಈಗ ಬಿಚ್ಚಿಡುವುದು ಸರಿಯಲ್ಲ. ಇಂದಿಲ್ಲ ನಾಳೆ ಅದು ತಮಗೆ ಗೊತ್ತೇ ಆಗಬಹುದು. ಕೂಡುವ ಮೊದಲೇ ಆಡುವುದು ಒಳಿತು. ಕೂಡಿದ ಮೇಲಿನ ಕಾಡಾಟ ಒಳ್ಳೆಯವಲ್ಲ—ಒಂದೇ ಮಾತಿನಲ್ಲಿ ಹೇಳಿ ಮುಗಿಸುತ್ತೇನೆ; ನನ್ನ ತಂದೆಯ ಸಾಲಕ್ಕಾಗಿ ಪಠಾಣನೊಬ್ಬ ನನ್ನನ್ನು ..............ಮುಂದೆ ನನ್ನ ತಂದೆಯ ಸಾವು—ನನ್ನ ಪ್ರಸೂತಿ—ಆ ಕೂಸಿನ ಸಾವು—ನನ್ನ ಕಲಂಕ—ಇವೇ ನನ್ನನ್ನು ಊರು ಬಿಡಿಸಲು ಕಾರಣವಾದುವು. ನರ್ಸ್‌ವೃತ್ತಿಯನ್ನು ಕೈಕೊಂಡೆ. ಈ ಐದು ವರ್ಷಗಳಲ್ಲಿ ನಡೆದು ಹೋದ ಮಾತುಗಳನ್ನು ಮರೆತುಹೋದೆ. ಈಗ ಮದುವೆಯ ಮಾತು ಬಂದಾಗ ಅದರ ನೆನಪೂ ಬರುತ್ತದೆ. 'ನಡೆದುಹೋದ ಮಾತು ನನ್ನ ಸುಂದರ ಭವಿಷ್ಯಕ್ಕೆ ಮಾರಕವಾಗಿ ಪರಿಣಮಿಸಿದರೆ!—' ಎಂದು ಧೈರ್ಯವಾಗಿ—ಸತ್ಯವಾಗಿ—ತಮ್ಮ ಮುಂದೆ ಈ ಮಾತುಗಳನ್ನು ಹೇಳಿಬಿಡುತ್ತಿದ್ದೇನೆ. ತಮಗೆ ತಿಳಿದಂತೆ ಉತ್ತರ ಬರೆಯಿರಿ. ಹೆಚ್ಚಿಗೆ ಬರೆಯಲು ಮತ್ತಾವ ಸಮಾಚಾರವೂ ಇಲ್ಲ. ತಾವು ಉದಾರಬುದ್ಧಿಯಿಂದ ನನ್ನನ್ನು ಕ್ಷಮಿಸಿ ಸ್ವೀಕರಿಸಿದರೆ,

ನಾನು ಸಂಪೂರ್ಣ ನಿಷ್ಪ್ರವಳು....

—ಜಾನಕಿ ”

ಓದು ಮುಗಿಸಿದೊಡನೆಯೇ ರಾಮನ್ ಪತ್ರವನ್ನು ಕೈಯಲ್ಲಿಯೇ ಮಡಿಸಿದರು. ಇನ್ನು ಜಗತ್ತಿನಲ್ಲಿರುವುದೇ ಬೇಡವೆಂದೆಣಿಸಿದರು. ಆ ದುಂಡು ಮುಖದ—ಆ ಸೌಂದರ್ಯದ—ಹಿಂದೆ ಇಂಥ ಕಪ್ಪು ಕಲೆ ಇರಬಹುದೆಂದು ರಾಮನ್ ತಿಳಿದಿರಲಿಲ್ಲ. ಪ್ರೇಮ ತೋರಿಸಿ ಕುತ್ತಿಗೆ ಕೊಯ್ದಷ್ಟು ಸಿಟ್ಟು ರಾಮನ್‌ರಿಗೆ ಬಂದುಬಿಟ್ಟಿತ್ತು. ಆ ಸಿಟ್ಟಿನ ರಭಸದಲ್ಲಿ ‘ ನಿನ್ನ ದಾರಿ ನಿನಗೆ ನನ್ನ ದಾರಿ ನನಗೆ! ನಮ್ಮಿಬ್ಬರ ನಡುವೆ ಇನ್ನು ಯಾವ ಸಂಬಂಧವೂ ಇಲ್ಲ!’ ಎಂದು ಅವಳಿಗೆ ಪತ್ರ ಬರೆದು ತಿಳಿಸಿಯೂ ಬಿಟ್ಟಿದ್ದರು.

ರಾಮನ್ ಕಣ್ಣುಮುಚ್ಚಿ ಹಾಗೆಯೆ ಖುರ್ಚಿಯಲ್ಲಿ ಕುಳಿತರು. ಮತ್ತೆ ಆ ದುಂಡು ಮುಖ, ಕೊರೆದ ಕಣ್ಣು, ಹಳದಿ ಮಿಶ್ರಿತ ಗೌರವರ್ಣ, ಉಂಗುರು ಗೂದಲು—ಕಾಣಿಸತೊಡಗಿದವು. ಅಂಜಿ ಒಮ್ಮೆ ಕಣ್ಣು ತೆರೆದರು—ಪ್ರಣಯ ಭಂಗದ ಸ್ಮೃತಿ ಅವರನ್ನು ಎಚ್ಚರಿಸಲಿಲ್ಲ.

“ ಮೇ ಆಯ್ ಕಮಿನ್ ” ಎಂಬ ಮೇಜರ್ ಡಕ್ಸ್‌ಬರಿಯ ಕೂಗು ಅವರನ್ನೆಚ್ಚರಿಸಿತು.

ಸದ್ಯದ ಪರಿಸ್ಥಿತಿಯಲ್ಲಿ ಏಕಾಂತಬಯಸುತ್ತಿದ್ದ ರಾಮನ್‌ರಿಗೆ ಮೇಜರ್ ಡಕ್ಸ್‌ಬರಿಯ ಆಗಮನ ಅಷ್ಟು ಸರಿಬರಲಿಲ್ಲವಾದರೂ, ಅದನ್ನು ಹೊರಗೆ ತೋರಗೊಡುವಂತಿರಲಿಲ್ಲ. ಏಕೆಂದರೆ ಮೇಜರ್ ಡಕ್ಸ್‌ಬರೀ, ಕೋಲಾಲಂಪೂರದ ಸ್ಟೇಶನ್ ಏರಿಯಾ ಕಮಾಂಡರ್, ಮೇಲಾಗಿ ಸಯಾಮ್ ರೇಲ್ವೆ ಪ್ರಿಝುನರ್ಸ್ ವಿಚಾರಣೆಯ ಮಿಲ್ಟ್ರೀ ಟ್ರಿಬ್ಯೂನಿನಲ್ಲಿಯ ನ್ಯಾಯಾಧಿಪತಿ.

“ಕಮಿನ್ ಸರ್” ಎಂದು ಮೇಲೆಮೇಲೆ ನಗು ತೋರಿಸುತ್ತಾ ರಾಮನ್ ಡಕ್ಸ್‌ಬರಿಯನ್ನು ಸ್ವಾಗತಿಸಿದರು.

“ ನಿಮಗಾಗಿ ಒಂದು ಹೊಸ ಸಂತೋಷದ ಸುದ್ದಿಯನ್ನು ತಂದಿದ್ದೇನೆ ” ಎನ್ನುತ್ತಾ ಡಕ್ಸ್‌ಬರಿ, ಬದಿಯ ಖುರ್ಚಿಯ ಮೇಲೆ ಕುಳಿತುಕೊಂಡರು “ಹಾಗಾದರೆ ಮೊದಲು ಇದನ್ನು ತೆಗೆದುಕೊಳ್ಳಿ !” ಎಂದು ರಾಮನ್‌ನಾಯರ್

ತನ್ನ ಆರ್ಡರ್ಲಿಯ ಕಡೆಯಿಂದ ಸ್ಕಾಚ್ ಬೀರ್ ತರಿಸಿ ಗ್ಲಾಸಿನಲ್ಲಿ ಹಾಕಿ ಕೊಟ್ಟರು. ಮಲಾಯಾದಲ್ಲಿ ಬೀರ್ ಕುಡಿಯುವುದೆಂದರೆ, ಹಿಮಾಲಯದಲ್ಲಿ ಕುಳಿತು ಚಹ ಕುಡಿದಷ್ಟು ಆನಂದ. ಡಕ್ಸ್‌ಬರೀ ಕೈಯಲ್ಲಿ ಗ್ಲಾಸನ್ನು ತೆಗೆದು ಕೊಂಡು:

"ನೋಡಿ, ನಾನು ಇದೀಗ ಕಮಾಂಡ್ ಎಚ್. ಕ್ಯೂ. ಹೆಡ್‌ಕ್ವಾರ್ಟರಿನಿಂದ ಬರುತ್ತಿದ್ದೇನೆ. ಅಲ್ಲಿ ಇಂದೇ ಆರ್ಡರ್ ಹೊರಟಿದೆ: ನಿಮ್ಮನ್ನು 'ಮೇಜರ್' ಪದವಿಗೆ ಏರಿಸಲಾಗಿದೆ. ಧನ್ಯವಾದಗಳು." ಎಂದು ತಿಳಿಸಿದರು. ಜಾನಕಿಯ ವಿಷಯದಿಂದ ವ್ಯಗ್ರವಾದ ರಾಮನ್‌ರ ಮನಸ್ಸು, ತಮಗೆ ಮೇಜರ್ ಹುದ್ದೆ ದೊರಕಿದ್ದಕ್ಕೆ ಪ್ರಸನ್ನವಾಯಿತು. "ಓ ಥ್ಯಾಂಕ್ಸ್ ಮಚ್" ಎಂದು ಹೇಳಿ ರಾಮನ್‌ರು ಮತ್ತೆ ಬೀರ್ ಬಾಟಲಿಗೆ ಕೈಹಾಕಿದರು. ಡಕ್ಸ್ ಬರೀಯವರು ಮತ್ತೊಂದು ಗ್ಲಾಸನ್ನು ಕೈಯಲ್ಲಿ ತೆಗೆದುಕೊಳ್ಳುತ್ತಾ:

"ಇನ್ನೂ ಮುಂದೆ ನೋಡಿ: ಮೇಜರ್ ಪದವಿಯಷ್ಟಕ್ಕೇ ಮುಗಿಯಲಿಲ್ಲ. ನೀವು ನಾಳೆಯಿಂದ ಸಯಾಮ್ ರೇಲ್ವೆ ಪ್ರಿಸ್ನೂನರ್ಸ್ ವಿಚಾರಣೆಯ ಮಿಲ್ಟ್ರೀ ಟ್ರಿಬ್ಯೂನಲ್ಲಿಯ ಒಬ್ಬ ಮೆಂಬರು" ಎಂದು ಹೇಳಿದರು. ಇದನ್ನು ಕೇಳಿಯಂತೂ ರಾಮನ್‌ರು ಅವಾಕ್ಕಾದರು. ಇಷ್ಟೊಂದು ಮಹತ್ವದ ಕೆಲಸ, ತಮ್ಮ ಪಾಲಿಗೆ ಇಷ್ಟು ಬೇಗ ಬರುವುದೆಂದು ಅವರು ತಿಳಿದಿರಲಿಲ್ಲ. ಆದರೇನು? ಗ್ರಹಗಳೇ ಒಳಿತಾದಾಗ ಎಲ್ಲವೂ ಸಾಧ್ಯ—

ಬೀರ್ ಕುಡಿದು ಮುಗಿದನಂತರ ಇಬ್ಬರೂ ಸಿಗರೇಟನ್ನು ಹಚ್ಚಿದರು. ಕೈಯಲ್ಲಿದ್ದ ಕೊರೆದ ಕಡ್ಡಿಯನ್ನು ಒಗೆಯುತ್ತಾ ಡಕ್ಸ್‌ಬರೀ "ಸರಿ, ನಾನಿನ್ನು ಹೊರಡುತ್ತೇನೆ; ಈ ಫಾಯಿಲು ತೆಗೆದುಕೊಳ್ಳಿ! ಸಯಾಮ ರೇಲ್ವೆಯ ಮೇಜರ್ ಓಸಾಕಾ ಅವರ ವಿಚಾರಣೆಯ ಫಾಯಿಲು! ಚೆನ್ನಾಗಿ ಅಭ್ಯಾಸ ಮಾಡಿರಿ! ಅದರ ಜತೆಯಲ್ಲಿಯೇ ಇದೂ ಒಂದು ಫಾಯಿಲು: ಶ್ರೀಮತಿ ಓಸಾಕಾ ಅವರಿಗೆ ಸಂಬಂಧಿಸಿದುದು. ಇಬ್ಬರದೂ ನಾಳೆಯೇ ವಿಚಾರಣೆಯ ಕೊನೆಯ ದಿನ" ಎಂದು ಹೇಳಿ ಕೋಣೆಯಿಂದ ಹೊರಬಿದ್ದರು. ಈ ಓಸಾಕಾ ದಂಪತಿಗಳು, ಶತ್ರುಗಳಾದ ಜಪಾನಿಗಳೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಒಂದು ಕ್ಷಣದ ಪೂರ್ವದಲ್ಲಿಯೆ ಉದಾಸೀನ ಚಿತ್ತರಾಗಿದ್ದ ರಾಮನ್ ನಾಯರರು, ಒಮ್ಮೆಲೇ ಉಲ್ಲಸಿತರಾದರು. ಫಾಯಿಲುಗಳನ್ನು ಕೈಯಲ್ಲಿ ತೆಗೆದುಕೊಳ್ಳುತ್ತಾ "ಇನ್ನು ಜಾನಕಿಯನ್ನು ಸಹಜವಾಗಿ ಮರೆಯಬಹುದು. ಬೇರೆಯ ಕೆಲಸದಲ್ಲಿ ಮನಸ್ಸು ತೊಡಗಿತೆಂದರೆ ತಾನೇ ಮರೆಯುತ್ತನೆ. ಆದರೂ ಜಾನಕಿ ತನ್ನ ಜೀವಮಾನದಲ್ಲಿ ಬಂದ ಮೊದಲನೆಯ ಹೆಣ್ಣು; ಅದೇ ಹೆಣ್ಣಾಗಿ ಪರಿಣಮಿಸಿತು. ಹಾಯ್!" ಎಂದು ಮನಸ್ಸಿನಲ್ಲಿಯೇ ವಿಚಾರಿಸುತ್ತಾ, ಫಾಯಿಲಿನ ಪುಟಗಳನ್ನು ಒಂದೊಂದಾಗಿ ತಿರೆಯತೊಡಗಿದರು ಆ ಫಾಯಿಲು ಶ್ರೀಮತಿ ಓಸಾಕಾನ ಕೇಸಿನದಾಗಿತ್ತು. ಅದನ್ನು ಸಂಪೂರ್ಣವಾಗಿ ಓದಲು ರಾಮನ್‌ರಿಗೆ ಸುಮಾರು ಎರಡು ಗಂಟೆ ಹಿಡಿಯಿತು. ಓದನ್ನು ಮುಗಿಸಿದ ನಂತರ ರಾಮನ್ ನಾಯರು ಮನಸ್ಸಿನಲ್ಲಿಯೇ ವಿಚಾರಿಸತೊಡಗಿದರು: "ಅಬ್ಬಾ ಹೆಣ್ಣೇ? ಹೆಣ್ಣು ಹೀಗೂ ಇರಬಹುದೇ? ಹೆಣ್ಣಲ್ಲ, ಪಿಶಾಚಿ! ಅವಳು ಸಿಂಗಾಪೂರಕ್ಕೆ ಬಂದದ್ದು, ೧೯೪೦ ರಲ್ಲಿ ಅಲ್ಲಿ ಕೆಲಸದ ಮಾಡುತ್ತಿದ್ದುದು ವೆಸ್ಟರ್ನ್ ಹಾಟೇಲಿನಲ್ಲಿ 'ಸರ್ವರ್' ಎಂದು. ಮುಂದೆ ಕ್ಯಾಪ್ಟನ್ ಗಿಬ್ಸನ್‌ನ ಜತೆಯಲ್ಲಿ ಪ್ರಣಯ. ಗಿಬ್ಸನ್ ಅವಳ ಪ್ರಣಯಜಾಲದಲ್ಲಿ ಬಲಿಬಿದ್ದ ಮೊದಲನೆಯಬೇಟೆ---ಎಂದು ಈ ಫೈಲು ಹೇಳುತ್ತಿದೆ. ಆದರೆ ಈ ಮೊದಲೆಷ್ಟೋ? ಗಿಬ್ಸನ್‌ನ ತರುವಾಯ ಮತ್ತೆ ಮೂವರು ಬ್ರಿಟಿಶ್ ಆಫೀಸರರು! ಇದೇನು? ಆ ಬ್ರಿಟಿಶ್ ಆಫೀಸರರ ಜತೆಯಲ್ಲಿ ಅರ್ಧ ನಗ್ನಾವಸ್ಥೆಯ ಚಿತ್ರ! ಎಲ್ಲಕ್ಕೂ ಮಿಗಿಲಾದ ಆಶ್ಚರ್ಯವೆಂದರೆ: ಇವಳು ಗಂಡನಿಂದ ದೂರವಿದ್ದು ೩ ವರುಷಗಳ ಮೇಲೆ ಮಗು ಒಂದು ಹುಟ್ಟಿದೆ. ಅದು ಗಿಬ್ಸನ್‌ನದು—ಎಂದು ಅವಳೇ ಒಪ್ಪುತ್ತಾಳೆ. ಆ ಮಗು ಸತ್ತಿತಂತೆ, ಇವಳೇ ಕೊಂದಿರಬಹುದೆಂದು ಗಿಬ್ಸನ್ ಸಂದೇಹಪಡುತ್ತಾನೆ. ಮುಂದೆ ೧೯೪೪ರಲ್ಲಿ ಸಿಂಗಾಪೂರ ಜಪಾನಿಗಳ ಕೈವಶವಾದೊಡನೆ, ಮತ್ತೆ ಓಸಾಕಾನನ್ನು ಕೂಡಿಕೊಂಡಿದ್ದಾಳೆ. ಪಾಪ, ಅವನಿಗೆ ಇದೆಲ್ಲವೂ ಗೊತ್ತಿಲ್ಲವೇನೋ? ಗೊತ್ತಿದ್ದರೆ ಗುಂಡಿಕ್ಕಿ ಕೊಲ್ಲುತ್ತಿದ್ದನೇನೋ? ಶ್ರೀಮತಿ ಓಸಾಕಾ ಇದೆಲ್ಲವನ್ನೂ ಮಾಡಿದ್ದು ದೇಶದ ಸಲುವಾಗಿ ಎಂದೇ? ಗೂಢಚಾರಿಣಿ, ದೇಶಭಕ್ತೆ—ಶೀಲ ಶಬ್ದದ ಸುಳಿವೇ ಇವರಲ್ಲಿಲ್ಲವೇನೋ! ಆದರಲ್ಲಿ ಹೆಣ್ಣುಗಳಿಗೇನು? ದೇಶಭಕ್ತಿಯ ಹೆಸರಿನಲ್ಲಿ ತಮ್ಮ ಸ್ವೈರಾಚಾರದ ವರ್ತನೆಗೆ ಇಂಬುಗೊಡುತ್ತಾರೆ. ಪಾಪ!

ಓಸಾಕಾನಿಗೆ ಇದರ ಸುಳಿವೇ ತಿಳಿಯದು. ನಾಳೆ ಕೋರ್ಟಿನಲ್ಲಿ ಇದನ್ನೆಲ್ಲ ಅವನೆದುರು ಓದಿ ತಿಳಿಸಿ ಬಿಡುತ್ತೇನೆ ನೋಡುವಾ, ಏನಾಗುವದೋ! ” ಎಂದು ಮತ್ತೊಂದು ಫಾಯಿಲಿಗೆ ಕೈಹಾಕಿದರು:

ಎರಡನೆಯ ದಿನ ಸಾಯಂಕಾಲ ಮೇಜರ್ ರಾಮನ್ ನಾಯರು ವಿಚಾರಣೆಯನ್ನು ಮುಗಿಸಿ, ತಮ್ಮ ಕೋಣೆಗೆ ಬಂದರು. ಇಂದು ನಿನ್ನೆಗಿಂತಲೂ ಅವರು ಹೆಚ್ಚು ಅಸ್ವಸ್ಥರಾಗಿದ್ದರು ಮತ್ತೆ ಸಿಗರೇಟನ್ನು ಹಚ್ಚಿಕೊಂಡು ಆರಾಮ ಖುರ್ಚಿಯಲ್ಲಿ ಪವಡಿಸಿ ವಿಚಾರಿಸತೊಡಗಿದರು.

“ ಟ್ರಿಬ್ಯೂನಿನಲ್ಲಿ ಶ್ರೀಮತಿ ಓಸಾಕಾಳ ಕರಾಳ ಕೃತ್ಯವನ್ನು ಮೇಜರ್ ಓಸಾಕಾನ ಎದುರಿನಲ್ಲಿ ಓದಿ ಹೇಳಿದರೂ ಅವನೆಷ್ಟು ಸ್ತಬ್ಧನಾಗಿದ್ದನಲ್ಲ? ‘ ನಿನ್ನ ಹೆಂಡತಿ ೪–೬ ಜನರ ಜತೆಯಲ್ಲಿ ಸಂಬಂಧವಿಟ್ಟಿದ್ದಳು ! ’ ಎಂದು ತಿಳಿಸಿದರೂ, ಅವನು ಶಾಂತಚಿತ್ತನಾಗಿರಬೇಕೆ ?— ಆಯಿತು, ನಾಳೆಗೆ ಅವನು ಗಲ್ಲಿಗೆ ಹೋಗುತ್ತಾನಲ್ಲ....ಅದಕ್ಕೇ ಅವನು ಅಷ್ಟೊಂದು ಉದಾಸೀನವೃತ್ತಿಯನ್ನು ತಳೆದಿರಬೇಕು ! ” ತಮ್ಮಷ್ಟಕ್ಕೆ ತಾವೇ ರಾಮನ್‌ರು ಸಮಾಧಾನ ಪಡಿಸಿಕೊಂಡರು.

ಮರುದಿನ ಮೂಡಿತು, ಕೋಲಾಲಂಪೂರದ ಸೆಂಟ್ರಲ್ ಜೇಲಿನಲ್ಲಿ ಮೇಜರ್ ಓಸಾಕಾನನ್ನು ಗಲ್ಲಿಗೇರಿಸುವ ದಿನವದು. ಎಲ್ಲ ಅಧಿಕಾರಿಗಳೂ ಅಲ್ಲಿ ಹಾಜರ್ ಇದ್ದರು. ರಾಮನ್‌ರೂ ಅಲ್ಲಿ ಉಪಸ್ಥಿತರಿದ್ದರು. ನಡೆದ ಸಂಸ್ಕಾರಗಳಿಗೆಲ್ಲ ಹಾಜರ್ ಇರುವುದು ಅವರ ಕರ್ತವ್ಯವೇ ಆಗಿತ್ತು. ಮುಂಜಾನೆ ೮–೩೦ ಕ್ಕೆ ಗಲ್ಲು ಎಂದರೆ ೮ ಘಂಟೆಗೆ ಮೇಜರ್ ಓಸಾಕಾನನ್ನು ಗಲ್ಲಿನ ಸ್ಥಳಕ್ಕೆ ತರಲಾಯಿತು. ಪದ್ಧತಿಯ ಪ್ರಕಾರ ರಾಮನ್ ನಾಯರರು ಮೇಜರ್ ಓಸಾಕಾನನ್ನು ಕೇಳಿದರು:

“ ನಿಮ್ಮ ಕೊನೆಯ ಇಚ್ಛೆಯನ್ನು ಹೇಳಬಯಸುವಿರಾ ? ”

" ಹೇಳಬಯಸುತ್ತೇನೆ; ಆದರೆ ನೀವು ಅದನ್ನು ನಡೆಯಿಸಗೊಡ ಲಾರಿರಿ ! "

" ಹೇಳಿ ನೋಡಿ ! ಸಾಧ್ಯವಾಗುವಂತಿದ್ದರೆ, ಕಾಯಿದೆ ಅನುಕೂಲವಾ ಗಿದ್ದರೆ, ನಿಮ್ಮ ಇಚ್ಛೆಯನ್ನು ನಡೆಸುತ್ತೇವೆ ಶಿಕ್ಷೆಯನ್ನು ರದ್ದುಮಾಡಿ—ಎಂದು ಮಾತ್ರ ಕೇಳಬೇಡಿ ! "

" ಹಾಗೆ ಹೇಳಬೇಡಿ. ನಾನು ನಿಪ್ಪೋನ್ ದೇಶದವ; ಕೊಟ್ಟ ಶಿಕ್ಷೆ ಯನ್ನು ನಗುಮುಖದಿಂದ ಸ್ವಾಗತಿಸುತ್ತೇನೆ ! "

" ಹಾಗಾದರೆ ಮತ್ತೇನು ? ಹೇಳಿ ತ್ವರೆಮಾಡಿ ! "

" ಕೊನೆಯ ಸಲ, ನನ್ನ ಮುದ್ದು ಹೆಂಡತಿಯನ್ನು ನೋಡಬಯಸು ತ್ತೇನೆ. ಒಂದು ಸಲ ಅವಳ ಮೈಮೇಲೆ ಕೈಯಾಡಿಸಲು ನನಗೆ ಐದುನಿಮಿಷ ಅವಕಾಶ ಕೊಡಿರಿ ! "

ಮೇಜರ್ ಓಸಾಕಾನ ಕೊನೆಯ ಇಚ್ಛೆಯನ್ನು ಕೇಳಿ, ರಾಮನ್‌ರಿಗೆ ಮೂರ್ಛೆಯೇ ಬಂದಂತಾಯಿತು. ಮೂರು ನಾಲ್ಕು ಜನರ ಜತೆಯಲ್ಲಿ ಸಂಬಂಧ ವಿಟ್ಟ ಹೆಂಡತಿಯ ಮೇಲೆ ಇಷ್ಟೊಂದು ಪ್ರೇಮವೇ ? ಓಸಾಕಾನ ರೀತಿ ಅವ ರಿಗೆ ವಿಚಿತ್ರವಾಗಿ ಕಾಣಿಸಿತು. ಆದರೂ ಕೇಳಿದರು:

" ನಿನಗೆ ಹುಚ್ಚೇನಾದರೂ ಹಿಡಿದಿದೆಯೋ ? "

" ಏಕೆ ? "

" ವ್ಯಭಿಚಾರಿಣಿ ಹೆಂಡತಿಯ ಮೇಲೆ ಇಷ್ಟೊಂದು ಪ್ರೇಮವೇ ? "

" ನಾನು ಅಧಿಕಾರದಲ್ಲಿದ್ದರೆ ತಮ್ಮನ್ನು—ಇರಲಿ, ಆ ಪವಿತ್ರ ಹೆಣ್ಣನ್ನು ವ್ಯಭಿಚಾರಿ ಎಂದು ಕರೆಯಬೇಡಿ ! ಸಿಂಗಾಪೂರ ದ್ವೀಪ ೧೫ ದಿನಗಳಲ್ಲಿ ಸ್ವವಶವಾಗುವುದಕ್ಕೆ ಕಾರಣರಾದವರಲ್ಲಿ, ನನ್ನ ಹೆಂಡತಿಗೇ ಪ್ರಥಮಸ್ಥಾನ ಸಲ್ಲುತ್ತದೆ ! "

" ಅದೆಲ್ಲ ನಿಜ, ಆದರೆ ಅವಳು ಬೇರೆ ಬೇರೆ ೪-೫ ಜನರ ಜತೆಯಲ್ಲಿ ಸಂಬಂಧ ಬೆಳಸಿದ್ದಕ್ಕಾಗಿ ನೀನೇನು ಹೇಳುತ್ತಿ ? "

" ದೇಶದ ಸಲುವಾಗಿ ದುಡಿಯುವಾಗ ದೇಹದ ಪರಿವೆಯನ್ನೇ ಅವಳಿಡ ಲಿಲ್ಲ! ಜೀವವನ್ನೇ ತೃಣಸಮಾನ ಬಗೆದ ನಮಗೆ—ಅವಳಿಗೆ—ದೇಹದ

ಬೆಲೆ ಎಷ್ಟು? ಅವಳು ಬೇರೆಯವರ ಜತೆಯಲ್ಲಿ ಸಹವಾಸ ಬೆಳಸಿದ್ದು ನಿನ್ನೆಯೇ ನನಗೆ ಗೊತ್ತಾಯಿತೆಂದು ತಾವು ಬಗೆದಿರಬಹುದು. ನನಗೆ ಅವಳಿಂದ ಆಗ ದಿನದಿನವೂ ಕಾಗದ ಬರುತ್ತಾ ಇತ್ತು. ಆಗಿನಿಂದಲೇ ನನಗೆ ಎಲ್ಲ ಸಂಗತಿಯು ತಿಳಿದಿದೆ. ಅವಳಿಗೆ ಅಷ್ಟೊಂದು ಪ್ರೀತಿ ಆ ಸಹವಾಸ ಬೆಳಿಸಿದವರ ಮೇಲಿದ್ದರೆ, ಆ ಬ್ರಿಟಿಶ್ ಆಫೀಸರನಿಂದ ಹುಟ್ಟಿದ ಕೂಸನ್ನು ನಾಯಿಯ ಗರ್ಭವೆಂದು ಅವಳು ಸ್ವಂತ ಕೈಯಿಂದ ಕೊಲ್ಲುತ್ತಿರಲಿಲ್ಲ!"

ಮೇಜರ್ ರಾಮನ್ ನಾಯರ್ ಬೆಪ್ಪರಾಗಿ ಬಿಟ್ಟರು. ಅವರ ಕಣ್ಣೆದುರಿನಲ್ಲಿ ಜಾನಕಿಯ ಮೂರ್ತಿ ಬಂದು ನಿಂತು, ತಮಗೆ ಛೀ ಹಾಕುತ್ತಿರುವಂತೆ ಭಾಸವಾಯಿತು. ಮನದೊಳಗಿನ ಅವಳ ಮೂರ್ತಿ, ಗುಡುಗಾಡಿ ಹೇಳಿದಂತೆ ಭಾಸವಾಗತೊಡಗಿತು.

"ನೋಡಿ, ಈಗಲಾದರೂ ಪಾಠ ಕಲಿಯಿರಿ. ಈ ಓಸಾಕಾನನ್ನು ನೀವು ಮುಂದೆ ಹೋಗಿರಿ—ಎಂದು ನಾನು ಹೇಳುವುದಿಲ್ಲ. ಬೇರೆಯವರ ಪಾಪಕ್ಕಾಗಿ ಮತ್ತೊಬ್ಬರನ್ನು ಕಳಿಯಬೇಡಿ! ತಂದೆಯು ಸಾಲಕ್ಕಾಗಿ ಸಿಕ್ಕ ನೆರೆಬ್ಬ ನನ್ನಂಥ ಅಬಲೆಯನ್ನು ಬಲಾತ್ಕರಿಸಿದ್ದು ನನ್ನ ತಪ್ಪೇ? ವಿಚಾರ ಮಾಡಿ!"

ಹೆಚ್ಚು ಹೊತ್ತು ಸ್ವಪ್ನ ಸಮಾಧಿಯಲ್ಲಿರಲು ರಾಮನ್ ನಾಯರಿಗೆ ವೇಳೆ ಇರಲಿಲ್ಲ. ಸ್ಥಿತಪ್ರಜ್ಞರಂತೆ ಮೇಜರ್ ಓಸಾಕಾನ ಇಚ್ಛೆಯನ್ನು ತಮ್ಮ ಸಹೋದ್ಯೋಗಿಗಳ ಜತೆಯಲ್ಲಿ ಆಲೋಚಿಸಿ, ಅವನ ಕೊನೆಯಾಸೆ ಪೂರೈಸುವೆನು—ಎಂದು ನಿರ್ಧರಿಸಿದರು. ಕೂಡಲೆ, ಅವರಪ್ಪಣೆಯಂತೆ ಶ್ರೀಮತಿ ಓಸಾಕಾ ಉದಾಸೀನ ಮುದ್ರೆಯಿಂದ ಆ ಸ್ಥಳಕ್ಕೆ ಬಂದಳು. ಅವಳು ಬಂದುದೇ ತಡ; ಓಸಾಕಾ ಅವಳನ್ನು ತೆಕ್ಕೆಮುಕ್ಕೆಯಾಗಿ ಅಪ್ಪಿಕೊಂಡ. ಇಬ್ಬರೂ ಹುಚ್ಚು ಹಿಡಿದವರಂತೆ ನಗಲು ತೊಡಗಿದರು. ಆ ನಗು ರೋದನದ ನಾಂದಿಯಾಗಿ ಪರಿಣಮಿಸಿತು. ವೇಳೆಯಾದ್ದರಿಂದ ರಾಮನ್ ಇಬ್ಬರನ್ನೂ ಬೇರ್ಪಡಿಸ ಹೋದರು. ಆಗ ಅವರ ಕಣ್ಣಲ್ಲಿ ಮೊದಲ ಹನಿ ಮೂಡಿತು. ಆ ಹನಿ ಮುಂದೆ ಹಳ್ಳದ ರೂಪವಾಗಿ ಹರಿಯತೊಡಗಿತು. ಓಸಾಕಾ, ರಾಮನ್‌ರ ಈ ಸ್ಥಿತಿಯನ್ನು ಗಮನಿಸಿ ಅವರಿಗೆ:

ನಿಮ್ಮ ಉಪಕಾರ ತುಂಬಾ ಆಯಿತು. ನೀವು ನನ್ನ ಸಲುವಾಗಿ ದುಃಖ ಪಡಬೇಡಿ. ನಮ್ಮಿಬ್ಬರ ಪ್ರೇಮ ನೋಡಿ ನಮ್ಮನ್ನು ಹುಚ್ಚರೆಂದು ಹಳಿಯ ಬೇಡಿ. ನೀವಿನ್ನೂ ಒಂದು ಶತಮಾನ ಹಿಂದಿದ್ದೀರಿ! ಇರಲಿ, ನೀವು ನಿಮ್ಮ ಕರ್ತವ್ಯ ನೆರವೇರಿಸಬಹುದು." ಎಂದು ಹೇಳಿ ಗಲ್ಲಿನ ಕಟ್ಟೆಯನ್ನೇರಿದ.

ಗಲ್ಲಿನ ಕೆಲಸ ಮುಗಿಸಿಕೊಂಡು ಹೊರಬರಲು ರಾಮನ್ ನಾಯರರಿಗೆ ಒಂದು ತಾಸು ಹಿಡಿಯಿತು. ಅದನ್ನು ಮುಗಿಸಿ ಹೊರಬಂದ ರಾಮನ್, ತಮ್ಮ ಜೀಪ್ ಕಾರನ್ನು ಏರಿದರು. ಡ್ರಾಯವ್ಹರ್ ಕೇಳಿದ:

"ಸರ್, ಹೆಡ್‌ಕ್ವಾರ್ಟರಿನ ಕಡೆ ಒಯ್ಯಲಾ?"

"ಬೇಡ, 72 I. G. H. ದ ಕಡೆಗೆ ನಡೆ."

ಡ್ರಾಯವ್ಹರ್ ೧೫ ನಿಮಿಷದಲ್ಲಿ ರಾಮನ್‌ರನ್ನು ಹಾಸ್ಪಿಟಲಿಗೆ ತಂದು ಮುಟ್ಟಿಸಿದ. ರಾಮನ್ ಕಾರಿನಿಂದ ಇಳಿದವರೇ, ಜಾನಕಿಯ ರೂಮನ್ನು ಸೇರಿದರು. ಜಾನಕಿ ಆವೇ ತನ್ನ ನೈಟ್ ಡ್ಯೂಟಿಯನ್ನು ಮುಗಿಸಿ ಬಂದು, ಸ್ನಾನಮಾಡಿ ಮೈಯ ಬಟ್ಟೆಗಳನ್ನು ಬದಲಾಯಿಸುತ್ತಿದ್ದಳು. ಇಂತಹ ಸ್ಥಿತಿ ಯಲ್ಲಿ ತಾನಿದ್ದಾಗ, ರಾಮನ್‌ರು ತನ್ನ ಕೋಣೆಯಲ್ಲಿ ಬಂದುದನ್ನು ನೋಡಿ ಒಮ್ಮೆಲೇ ನಡುವಿನ ಪರದೆಯನ್ನು ಸರಿಸಿದರು. ಒಂದು ನಿಮಿಷ ಸ್ತಬ್ಧತೆ ಆವರಿಸಿತ್ತು. ಜಾನಕಿ ಪತ್ತಲವನ್ನು ಸುತ್ತಿಕೊಳ್ಳುತ್ತಲೇ ಪರದೆಯ ಮರೆ ಯಿಂದಲೇ ಕೇಳಿದಳು:

"ಏಕೆ? ಮತ್ತೆ ಹಾಸ್ಪಿಟಲಿಗೆ ಬಂದಿರಿ? ಆರೋಗ್ಯ ಚೆನ್ನಾಗಿವೆ ಯಷ್ಟೇ?"

"ಆಗ ಬಂದದ್ದು ಆರೋಗ್ಯ ಸರಿಪಡಿಸಿಕೊಳ್ಳುವುದಕ್ಕೆ; ಈಗ ಬಂದದ್ದು ತಲೆ ಸರಿಪಡಿಸಿಕೊಳ್ಳುವುದಕ್ಕೆ! ನನ್ನ ದೇವರ ಹತ್ತಿರ ಬಂದಿದ್ದೇನೆ!"

"ಅಂಜಬೇಡ; ಸ್ನಾನ ಮಾಡದೆ ದೇವರನ್ನು ಮುಟ್ಟುವ ಸಾಹಸ ನಾನಿನ್ನು ಮಾಡಲಾರೆ! ಸ್ನಾನ ಮಾಡುವುದಕ್ಕೇ ಬಂದಿದ್ದೇನೆ ಈಗ!"

ಜಾನಕಿ ಮುಖವನ್ನು ಮೇಲಕ್ಕೆತ್ತಿದಳು. ರಾಮನ್‌ರಲ್ಲಿಯ ಪಶ್ಚಾತ್ತಾಪದ ಮುದ್ರೆ, ಪರದೆಯ ಮರೆಯಿಂದ ಅವಳಿಗೆ ಕಾಣುತ್ತಿತ್ತು. ಆನಂದದಿಂದಲೇ ಕೇಳಿದಳು:

“ಮೇಜರ್ ರಾಮನ್‌ರು ಈ ಮಾತನ್ನು ಆಡುತ್ತಿದ್ದಾರೆಯೇ ?”

“ಮೇಜರ್ ರಾಮನ್‌ನಲ್ಲ. ಜಾನಕೀಪತಿ ರಾಮನ್ ಹೇಳುತ್ತಿದ್ದಾನೆ!” ರಾಮನ್‌ರ ಈ ಮಾತಿನ ಕೊನೆಯೊಂದಿಗೆ, ಜಾನಕಿ ಹೊರಬಂದು ರಾಮನ್‌ರನ್ನು ಅಂತಃಕರಣಪೂರ್ವಕವಾಗಿ ಸ್ವಾಗತಿಸಿದಳು.

ಅವರಿಬ್ಬರ ನಡುವಿನ ಪರದೆ ಆಗಲೇ ಸರಿದು ಹೋಗಿತ್ತು.

---

# ವಿಜ್ಞಾನದ ವಿಷ



ನಗರ ಸಭಾಭವನದ ಅಟ್ಟ ಕಿಕ್ಕಿರಿದು ತುಂಬಿಹೋಗಿತ್ತು. ಒಳಗೂ ಹೊರಗೂ ಸ್ವಯಂಸೇವಕರ ಓಡಾಟ ನಡೆದಿತ್ತು. ಭವನದ ಹೊರಅಂಗಳ ದಲ್ಲಿ, ೫-೬ ಧ್ವನಿವಾಹಕ ಕರ್ಣಗಳು ಕಂಗೊಳಿಸುತ್ತಿದ್ದುವು. ಆ ಊರ ಪ್ರತಿ ಷ್ಠಿತ ಕಾರಖಾನೆದಾರರ ಕಾರುಗಳು, ಬದಿಯ ಆವಾರಿನಲ್ಲಿ ಸಾಲಾಗಿ ಶಿಸ್ತಿನಲ್ಲಿ ನಿಂತಿದ್ದುವು. ಈ ಎಲ್ಲ ಸಂಭ್ರಮ ಯಾವುದಕ್ಕೋಸ್ಕರ—ಎಂಬುದು ನೋಡು ವವನಿಗೆ ಒಮ್ಮೆಲೆ ತಿಳಿಯುವಂತಿತ್ತು. ಹೌದು ! ಪರೀಕ್ಷೆಯ ಫಲಿತಾಂಶ ನೋಡಿ ಬಂದ ವಿದ್ಯಾರ್ಥಿಯ ಮುಖದ ಮೇಲಿನ ಕಳೆಯಿಂದ, ಅವನ ಪರಿಣಾ ಮವನ್ನು ಗುರುತಿಸುವುದು ಕಠಿಣವಲ್ಲ ! ಹಾಗೆಯೇ, ಈ ಸಭಾಭವನದಲ್ಲಿ ನಲಿಯುತ್ತಿದ್ದ ಸಂಭ್ರಮ ಯಾರದೋ ಸ್ವಾಗತಕ್ಕಾಗಿ—ಎಂದು ಊಹಿಸು ವುದು ಸುಲಭ ಸಾಧ್ಯವಾದ ಮಾತು.

ಆ ಊಹೆ ಸಂಪೂರ್ಣ ನಿಜ. ಅದೇ ಊರಿನ ಒಬ್ಬ ಮನುಷ್ಯ ಪರದೇಶಕ್ಕೆ ಹೋಗಿ, ಯಂತ್ರೀಕರಣ ವಿದ್ಯೆಯಲ್ಲಿ ಹೊಸ ಸಂಶೋಧನೆಯನ್ನು ಮಾಡಿ, ಆ ವರುಷದ ವಿಶೇಷ ಪ್ರಾಯಿಜ್ ಒಂದನ್ನು ಗಳಿಸಿದ್ದ. ಆ ವಿಜ್ಞಾನಿಯೆಂದರೆ ಆ ಊರ ರಾಜು ಆ ತಾಲ್ಲೂಕಿನ ಒಂದು ಸಣ್ಣ ಹಳ್ಳಿಯ ಶಾಲಾ ಮಾಸ್ತರನ ಮಗ ರಾಜು. ಆದರೆ ಇಂದು ಅವನು ಒಬ್ಬ ಶಾಲಾ ಮಾಸ್ತರನ ಮಗ ರಾಜು ಎಂದು ಎಣಿಸಲ್ಪಡುತ್ತಿರಲಿಲ್ಲ— ಒಬ್ಬ ಪ್ರಸಿದ್ಧ ವಿಜ್ಞಾನಿ ಎಂದು— ಪ್ರಾಯಿಜ್ ಗಳಿಸಿಕೊಂಡ ಮಹಾ ವ್ಯಕ್ತಿ ಎಂದು ! ಕರ್ನಾಟಕಕ್ಕೂ ಬೇರೆ ಪ್ರಾಂತಕ್ಕೂ ಒಂದು ಉಪಯುಕ್ತ ಹೊಸ ಮಶಿನ್ನನ್ನು ಕಂಡುಹಿಡಿದ ಸಂಶೋ ಧಕನೆಂದು.

ಒಂದು ನಿಮಿಷದಲ್ಲಿ ೨೦೦ ಬೀಡಿಗಳನ್ನು ಕಟ್ಟುವ ಯಂತ್ರವನ್ನು ರಾಜು

ಕಂಡುಹಿಡಿದಿದ್ದ. ಅಬ್ಬಾ! ಒಂದು ನಿಮಿಷದಲ್ಲಿ ೨೧೦ ಬೀಡಿಗಳನ್ನು ಕಟ್ಟುವ ಯಂತ್ರವನ್ನು ಕಂಡುಹಿಡಿಯುವುದು ಸಾಮಾನ್ಯ ವಿಷಯವೇ?

ಈ ಜಿಲ್ಲೆಯ ಎಲ್ಲ ಬೀಡಿ ಕಾರಖಾನೆಯ ಭಂಡವಲುದಾರರು ರಾಜನನ್ನು ಹಾಡಿ ಹೊಗಳಿದ್ದರು. ಉದಾರಹಸ್ತದಿಂದ ಸಹಾಯ ಮಾಡಲು ತಮ್ಮ ಇಚ್ಛೆಯನ್ನು ಪ್ರಕಟಿಸಿದ್ದರು. ರಾಜನ ಸ್ವಾಗತಕ್ಕಾಗಿ ನಡೆದ ವೆಚ್ಚವನ್ನೆಲ್ಲ ಬೀಡಿಕಾರಖಾನೆಯ ಬಂಡವಾಳದಾರರು ವಹಿಸಿದ್ದರು. ಅಂತೂ ರಾಜನನ್ನು ಸ್ವಾಗತಿಸುವುದಕ್ಕಾಗಿ ಇವರೆಲ್ಲರೂ ಆತುರರಾಗಿಬಿಟ್ಟಿದ್ದರು.

ನಗರ ಸಭಾಭವನದ ಎದುರಿನ ಮತ್ತೊಂದು ಬೀದಿಯಲ್ಲಿ ನಿಂತ ಜನ ತಂಡವನ್ನು ನೋಡಿದಾಗ, ಆಂಗ್ಲ ಗಾದೆಯ ಮಾತೊಂದು ನೆನಪಿಗೆ ಬರುತ್ತಿತ್ತು: "ಮಿತ್ರರನ್ನು ಗಳಿಸಿಕೊಂಡವರಿಗೆ ಕೆಲ ಶತ್ರುಗಳಿರುವುದೂ ಸ್ವಾಭಾವಿಕ" ಎಂದು ಆ ಬೀದಿಯ ತುಂಬ ಕೆಲವು ಕೂಲಿ ಜನ ಮಾತ್ರ ಕರೀಪತಾಕೆಯನ್ನು ಹಿಡಿದುಕೊಂಡು, ನಿಷೇಧಪ್ರದರ್ಶನಕ್ಕಾಗಿ ಕಾದು ಕುಳಿತಿದ್ದರು. ಅವರೆಲ್ಲ ಬೀಡಿ ಕಾರಖಾನೆಯಲ್ಲಿ ದುಡಿಯುವ ಕೂಲಿಜನ. ಬೀಡಿಕಟ್ಟುವ ಹೊಸ ಯಂತ್ರ ಬಂದು ೧೫ ದಿನಗಳಾದುವು. ಇವರೆಲ್ಲ ಅಂದಿನಿಂದ ನಿರುದ್ಯೋಗಿಗಳಾಗಿದ್ದರು. ಅವರೆಲ್ಲರ ಹಸಿದ ಹೊಟ್ಟೆ ಅವರ ಮುಖದ ಮೇಲೆ ಯಾವುದೊ ಒಂದು ಪೈಶಾಚಿಕ ಉಗ್ರಕಳೆಯನ್ನು ತಂದಿರಿಸಿತ್ತು. ಅವರ ಗಂಟಲು, ಮಳೆಗಾಲದಲ್ಲಿ ರಭಸದಿಂದ ಹರಿಯುವ ಹಳ್ಳದಂತೆ ಕರ್ಕಶವಾದ ಕೇಕೆ ಹಾಕುತ್ತಿದ್ದುವು.

"ಬೀಡಿ ಕಟ್ಟುವ ಯಂತ್ರವನ್ನು ಹುಡುಕಿದ ರಾಜು ಮನುಷ್ಯನಲ್ಲ—ಪಶು, ರಾಕ್ಷಸ! ಅವನಿಗೆ ಧಿಕ್ಕಾರ!"

ಪೋಲಿಸ ಪಡೆ ಬರುವ ಮೊದಲೇ ಅವರ ಈ ಅಬ್ಬರ ನೋಡುವ ಹಾಗಿತ್ತು. ಪೋಲೀಸರ ಎರಡು ಮೋಟರ್ ಲಾರಿಗಳು ಬಂದಾಕ್ಷಣ ಕರಿಯ ಪತಾಕೆಯ ಜನ ಚೆದರಿತು. ಈ ಯಾಂತ್ರಿಕ ಯುಗದಲ್ಲಿ ಕೇವಲ ಸಿಟ್ಟಿಗೆ ಮಹತ್ವವಿಲ್ಲ; ಕೇವಲ ಶಕ್ತಿಗೆ ಮಹತ್ವವಿಲ್ಲ; ಬಾಹು ಬಲದ ಕಾಲ ಹಿಂದೆ ಹೋಯಿತು. ಇಂದು ಯಾಂತ್ರಿಕ ಯುಗ. ಇಲ್ಲವಾದರೆ— ?

ಇಲ್ಲವಾದರೆ ೨೫ ಪೋಲೀಸರು ೫–೬ ನೂರು ಜನರನ್ನು ಚೆದರಿಸುವದೆಂದರೆ? ಹೌದು. ಅವರಲ್ಲಿ ಬಂದೂಕುಗಳಿದ್ದುವು. ಅವೂ ಒಂದು

ಯಾಂತ್ರಿಕ ಸಾಧನಗಳು. ಒಬ್ಬ ಮನುಷ್ಯ ಬಹಳವಾದರೆ ಇಬ್ಬರನ್ನು ತಡೆ ಹಿಡಿದು ನಿಲ್ಲಿಸಬಹುದು. ಆದರೆ ಯಂತ್ರ ಸಾಮರ್ಥ್ಯವಿದ್ದಾಗ—? ೫೦ ಜನರ ಕೆಲಸ, ಯಂತ್ರವಿದ್ದವನೊಬ್ಬ ಮಾಡಬಲ್ಲ. ಉಳಿದ ೪೯ ಜನರು—?

ಇದೇ ಬಗೆಹರಿಯದ ಸಮಸ್ಯೆಯನ್ನು ಬೀಡಿ ಕೂಲಿಕಾರರ ಕರಿಯ ಪತಾಕೆ ಚಟಪಟಿಸಿ ಜಗತ್ತಿಗೆ ಸಾರಿ ಹೇಳುತ್ತಿರುವಂತೆ ಭಾಸವಾಗುತ್ತಿತ್ತು. ಮತ್ತೆ ಕೂಲಿಕಾರರು ಕೇಕೆ ಹೊಡೆದರು:

"ರಾಜು ಮನುಷ್ಯನಲ್ಲ—ಅವನು ಪಶು. ರಾಕ್ಷಸ. ಧಿಕ್ಕಾರ!"

ಆದರೆ ಈ ಕೂಗು ರಾಜುವಿನ ಕಿವಿಯನ್ನು ಮುಟ್ಟುವಂತಿರಲಿಲ್ಲ. ಕೇವಲ ಯಾಂತ್ರಿಕ ಸಾಧನವೇ ಅದನ್ನು—?

ನೀರಿನ ಪ್ರವಾಹಕ್ಕೆ ಎಷ್ಟು ಒಡ್ಡು ಕಟ್ಟಿದರೇನಾಯಿತು? ಅದು ಎಲ್ಲಿಯೋ ಸೆಲೆಯ ರೂಪವಾಗಿ ಹೊರಬರುತ್ತದೆ.

ಆ ಕೂಲಿಕಾರರ ತಂಡದಲ್ಲಿದ್ದ ಸುಬ್ಬಮ್ಮ ಸೆಲೆಯ ರೂಪವಾಗಿಯಾದರೂ ಆ ಪಡೆಯ ಗೋಡೆಯನ್ನೂ ಮುರಿದು ಒಳಹೋಗಬಯಸುತ್ತಿದ್ದಳು. ಆದರೆ ಸಭಾಭವನದಲ್ಲಿ ಕೇವಲ ಆಮಂತ್ರಿತರಿಗಷ್ಟೇ ಪ್ರವೇಶವಿತ್ತು. ಉಳಿದವರಿಗೆ—ಯಾಂತ್ರಿಕ ಸಾಧನಗಳ ಮೂಲಕ—ರಾಜುವಿನ ಭಾಷಣವನ್ನು ಹೊರಗಿನಿಂದಲೇ ಕೇಳುವ ವ್ಯವಸ್ಥೆಯನ್ನು ಮಾಡಲಾಗಿತ್ತು.

ಆದರೂ ಸುಬ್ಬಮ್ಮ ಗೇಟಿನ ಬಳಿ ನಿಂತಿದ್ದ ಪೋಲಿಸ ಹವಾಲ್ದಾರನನ್ನು ಅಂಗಲಾಚಿ ಬೇಡಿಕೊಂಡಳು:

"ಅಣ್ಣಾ, ಈ ಮುದುಕಿ ಅಷ್ಟು ಒಳಗ ಹೋಗಿ ನೋಡಿ ಬರ್‍ತಾಳಪ್ಪಾ!"

ಪೋಲಿಸ ಹವಾಲ್ದಾರ ಮೊದಲು ನಕ್ಕುಬಿಟ್ಟ. ಆದರೆ ಒಮ್ಮೆಲೆ ಸುಬ್ಬಮ್ಮನ ಗುರುತು ಹತ್ತಿತು. ಕುತೂಹಲಿಯಾಗಿ ಕೇಳಿದ: "ಅಲ್ಲೇನ ಸುಬ್ಬಮ್ಮಾ! ನಿನ್ನ ಮಗ ಭಾಂವಿ ಬಿದ್ದು ಸತ್ತು ನಾಲ್ಕು ದಿನಾ ಆತು! ಈಗ ಸಭಾದಾಗಿನ ಮಂದಿನ್ನ ನೋಡ್ಲಾಕ ಬಂದೀಯಲ್ಲವ್ವಾ?"

ಮುದುಕಿ ಸುಬ್ಬಮ್ಮನ ಕಣ್ಣಲ್ಲಿ ನೀರು ಧಾರಾಕಾರವಾಗಿ ಹರಿಯತೊಡಗಿತು. ಅವಳ ಕಂಠದಿಂದ ಮಾತೇ ಹೊರಡಲಿಲ್ಲ. ಅವಳ ದುಃಖವನ್ನು ಕಂಡು ಮರುಗಿದ ಪೋಲಿಸ ಹವಾಲ್ದಾರನೇ ಮತ್ತೆ ಮಾತನಾಡಿಸಿದ:

“ಇರಲಿ ಬಿಡು, ಯಾಕ ಅಳೋದು! ಎಲ್ಲಾ ಮಾಡಸೋಂವ ಪರಮಾತ್ಮ! ನಾವು, ನೀವು ಯಾರು? ಆದರ ಇಂವ ಭಾಂವಿ ಯಾಕ ಬೀಳಬೇಕಾಗಿತ್ತು? ಬೀಡಿ ಕಾರಖಾನ್ಯಾಗಿನ ನೌಕರಿ ಹೋದರ, ಮತ್ತೆಲ್ಲಾದರೂ ನೋಡಬೇಕಾಗಿತ್ತು? ಸಂಗಾಟಲೇ ಹೋಗಿ ಜೀವಾನs ಕೊಡಬೇಕೇನು?”

ಅವನ ಕೊನೆಯ ಮಾತು ಮುಗಿಯುವ ಮೊದಲೇ ಸುಬ್ಬಮ್ಮ ಅವ್ವನನ್ನು ಅಪ್ಪಿಕೊಂಡು ಹುಚ್ಚು ಹಿಡಿದವರಂತೆ ದೊಡ್ಡ ಧ್ವನಿ ತೆಗೆದು ಅಳತೊಡಗಿದಳು. ಕೂಡಿದ ಜನರಲ್ಲಿ ತನ್ನ ಸ್ಥಾನಮಾನಕ್ಕೆ ಕುಂದೆಲ್ಲಿ ಬರುವುದೋ ಎಂದು ಆ ಪೋಲಿಸನಿಗೆ ನಾಚಿಕೆಯಾಗಿರಬೇಕು. ಅದರಿಂದಲೇ ಅವನು ಸುಬ್ಬಮ್ಮನನ್ನು ಹೊರಶಬ್ದಗಳಿಂದ ಸಂತೈಸಿ, ಮತ್ತೆ ಕೈಯಲ್ಲಿ ಲಾಠಿಯನ್ನು ಹಿಡಿದು ಗೇಟಿನತ್ತ ನಡೆದ

ಆಘಾತವಾಗಿ ನಿಂತ ಹಸ್ಪಿಟಲ್ಲಿನ ದ್ವಾರಕ್ಕೆ ಹೋದರೂ ಸುಬ್ಬಮ್ಮನಿಗೆ ದುಃಖವೆನಿಸಲಿಲ್ಲ. ಅವಳ ಜೀವನಸಾಧಾರವಾಗಿದ್ದ ಮಗನೇ ನಿರುದ್ಯೋಗಿಯಾಗಿ ಭಾಂವಿ ಬಿದ್ದು ಸತ್ತುಹೋಗಿದ್ದ. ಆ ದುಃಖದ ಮುಂದೆ—ಕ್ಷಣಕಾಲ ಸಂತೈಸುವವ ದೂರಹೋದ ದುಃಖ ಎಲ್ಲಿಯದು?

ಕುರುಡನು ಧರಿಸಿದ ಅಂಗಿಯ ಮೇಲೆ ಮಸಿ ಸುರುವಿ, ‘ನಿನ್ನ ಅಂಗಿ ಕಪ್ಪಾಯಿತು.’ ಎಂದು ಕೂಗಿದರೆ, ಕುರುಡನಿಗೆ ದುಃಖವೇ? ಕಣ್ಣಿಲ್ಲದ ದುಃಖದ ಮುಂದೆ, ಕರಿಯದು ಬಿಳಿಯದು—ಒಂದೇ ಅವನಿಗೆ.

ಮುದುಕಿ ಸುಬ್ಬಮ್ಮನೂ ಕಣ್ಣೊರಸಿಕೊಳ್ಳುತ್ತ ಗೇಟಿನ ಹತ್ತಿರ ಬಂದು ನಿಂತಳು ಮುದುಕಿ ಎಂದು ಪೋಲಿಸರಾರೂ ಅವಳ ಗೋಜಿಗೆ ಹೋಗಲಿಲ್ಲ. ಸುಬ್ಬಮ್ಮ ಗೇಟಿಗೆ ಬಂದ ಮೂರು ನಿಮಿಷಗಳಲ್ಲಿಯೇ ಎರಡು ಮೂರು ಕಾರುಗಳು ಬಂದುವು. ಮೂರನೆಯ ಕಾರಿಗೆ ಮೇಲುಹೊದಿಕೆ ಇರಲಿಲ್ಲ. ಆ ಕಾರಿನಲ್ಲಿಯೇ ರಾಜು ವಿರಾಜಮಾನನಾಗಿದ್ದ. ರಾಜನ ಕಾರು ಗೇಟಿಗೆ ಬರುತ್ತಲೂ ನಗರಸಭೆಯ ಪ್ರತಿಷ್ಠಿತ ಜನ ಅವನಿಗೆ ಹೂವಿನ ಹಾರ ಹಾಕಿ ಕೆಳಗಿಳಿಸಿ ಅವನನ್ನು ಸಭಾಭವನದತ್ತ ಕರೆದುಕೊಂಡು ನಡೆದರು. ಆಗಲೂ ಮುದುಕಿ ಸುಬ್ಬಮ್ಮ ಗೇಟಿನ ಬಳಿಯಲ್ಲಿಯೇ ನಿಂತಿದ್ದಳು. ರಾಜ ಹಾದು ಹೋಗುವಾಗ, ಅವನನ್ನು ಸುಬ್ಬಮ್ಮ ತೀರ ಹತ್ತಿರದಿಂದ ನೋಡಿದಳು.

ನೋಡುತ್ತಿರುವಂತೆ ಅವಳಲ್ಲಿ ಮಾತೃಭಾವನೆ ಜ್ವಾಲಾಮುಖಿಯಂತೆ ಸ್ಫೋಟ ವಾಯಿತು. ರಾಜ ಸಭಾಭವನವನ್ನು ಸೇರಿದರೂ, ಮುದುಕಿ ಸುಬ್ಬಮ್ಮ ಸಿಂತಲ್ಲಿಯೇ ನಿಂತು ಕಣ್ಣು ಮುಚ್ಚಿಕೊಂಡಳು. ಅವಳಿಗೆ ತನ್ನ ದುಃಖ ಎಲ್ಲಿಯೋ ಮಾಯವಾದಂತೆ ಭಾಸವಾಯಿತು. ಆ ದುಃಖದ ಎಡೆಯಲ್ಲಿ ಮೇರೆ ಮೀರಿದ ಆನಂದ, ಸಂತೋಷ ನಲಿಯತೊಡಗಿತು ಅವಳು ಕಣ್ಣು ಮುಚ್ಚಿದಂತೆಯೇ ಅವಳ ಮನಸ್ಸು ಅವಳನ್ನು ಭೂತಕಾಲಕ್ಕೆ ಸೆಳೆದೊಯ್ದಿತು. ಸುಬ್ಬಮ್ಮ ತನ್ನ ಹಿಂದಿನ ದಿನಗಳನ್ನು ಜ್ಞಾಪಿಸಿ ವಿಚಾರಿಸತೊಡಗಿತು.

—ಆ ಹಳ್ಳಿಯಲ್ಲಿ ಒಬ್ಬ ಸಾಲೆಯ ಮಾಸ್ತರರ ಮನೆಯ ಬದಿಯಲ್ಲಿಯೇ ತಾನು ತನ್ನ ಗಂಡನೊಂದಿಗೆ ಇದ್ದಳು ತನ್ನ ಗಂಡ ಕುಲಕರ್ಣಿಕೆಯನ್ನು ಕಳೆದುಕೊಂಡ ಕುಲಕರ್ಣಿಯಾಗಿದ್ದ ಮುಂದಿಯ ಹೊಲ ಲಾವಣಿ ಹಿಡಿದು ಮಾಡಿ ದುಡಿದು ಮನೆಯನ್ನು ನಡೆಯಿಸಿದ್ದ. ಹೀಗಾಗಿ ತಾನೂ ಬಡವಿ, ಮಾಸ್ತರರೂ ಹೇಳಿಕೊಳ್ಳುವಷ್ಟು ಸಿರಿವಂತರಲ್ಲ ಮುಂದೆ ಆ ಮಾಸ್ತರರ ಹೆಂಡತಿಯ ಪ್ರಸೂತಿಯ ದಿನ—ಅಯ್ಯೋ, ಅದು ಅವರ ಜೀವನದಲ್ಲಿ ಬಂದ ಬಿರುಗಾಳಿ—ದೊಡ್ಡ—ಸೂಲಗಿತ್ತಿಯ ಕೆಲಸಕ್ಕೆ ತಾನೇ ನಿಂತುಕೊಂಡಿದ್ದಳು. ಆದರೆ ದುರ್ದೈವ! ಮಾಸ್ತರರ ಹೆಂಡತಿ ಸುಪುತ್ರಳಾಗಿ ಹಡೆದಳೇನೋ ನಿಜ; ಆದರೆ ಹಡೆದ ಬೇನೆಯಿಂದ ಮೂರನೆಯ ದಿನವೇ ಮರಣಹೊಂದಿ ದಳು. ಅವಳಿಗಿಂತಲೂ ಒಂದು ವರುಷ ಮೊದಲು ತನ್ನ ಹೆರಿಗೆಯಾಗಿತ್ತು. ತಾನೂ ಗಂಡುಮಗನನ್ನು ಹಡೆದಿದ್ದಳು. ಆ ಮಗುವಿಗೆ ಅದೇ ವರುಷ ತುಂಬುತ್ತಿತ್ತು. ಅಂತಹ ಆಪತ್ಕಾಲದಲ್ಲಿಯೂ ತಾನು ತನ್ನ ಮಗುವನ್ನು ಬದಿಗಿರಿಸಿ ಮಾಸ್ತರನ ಮಗನಿಗೆ ತನ್ನ ಎದೆಹಾಲನ್ನು ಕುಡಿಸಿದಳು.

ತನ್ನ ಹಾಲಿನಿಂದಲೇ ಆ ಮಗು ದೊಡ್ಡದಾಯಿತು. ಮುಂದೆ ಆ ಮಗು ೧೭ ವರುಷದವನಾಗುವ ವರೆಗೂ ತಾನೇ ತಾಯಿಯಾಗಿದ್ದಳು. ಮುಂದ ಮಾಸ್ತರರಿಗೆ ಯಾವುದೋ ಲಾಟ್ರಿಯಲ್ಲಿ ಅಪಾರ ಹಣ ದೊರಕಿತು. ಅವರು ಹಳ್ಳಿಬಿಟ್ಟು ಮಗನ ಮುಂದಿನ ಶಿಕ್ಷಣಕ್ಕಾಗಿ ಮುಂಬಯಿಗೆ ಹೋದರು. ಅಂದೇ ಅವರ ತಮ್ಮ ಪರಿಚಯ ಮರೆತುಹೋಯಿತು. ಜೀವನವೂ ಒಂದು ಪ್ರವಾಹ ಬಿರುಗಾಳಿ ಬೀಸಿದಾಗ ದೋಣಿಗಳು ಒಂದೆಡೆಯಲ್ಲಿ ಸೇರಿ ಒಬ್ಬರೊಬ್ಬರ ಸಹಾಯ ಬಯಸುತ್ತವೆ, ಮತ್ತೆ ಬಿರುಗಾಳಿ ನಿಂತಿತೆಂದರೆ, ಅವು ತಮ್ಮ ತಮ್ಮ

ಹಾದಿ ಹಿಡಿಯುತ್ತನೆ. ಬಿರುಗಾಳಿಯಲ್ಲಿ ಬೆಳೆದ ಪರಿಚಯ ಬರೀ ಗಾಳಿಯ ಹಾಗೆ?

ಮುಂದೆ ಊರಲ್ಲಿ ದೊಡ್ಡ ಬರಗಾಲ ಬಿದ್ದಿತು. ಮೇವು ಇಲ್ಲದ್ದರಿಂದ ಜನ ಬಂದ ದರಕ್ಕೆ ದನಗಳನ್ನು ಮಾರಿ ಪಟ್ಟಣ ಸೇರತೊಡಗಿದರು. ತನ್ನ ಗಂಡ ಅದೇ ಕಾಲಕ್ಕೆ ಸಾಯಬೇಕೇ ? ಆ ದುಃಖ ಬೇರೆ. ಆದರೆ ದುಃಖ ವೆಂದು ಅಳುತ್ತ ಕೂತರೆ ಎರಡು ಜೀವಗಳ ಹೊಟ್ಟೆ ತುಂಬಬೇಕಲ್ಲ! ತಾನೂ ತನ್ನ ಮಗನನ್ನು ಕರೆದುಕೊಂಡು ಧಾರವಾಡವನ್ನು ಸೇರಿದಳು. ಆದರೆ ತನ್ನ ಮಗನನ್ನು ಮೊದಲಿನಿಂದಲೂ ಹೊಲಗೆಲಸಕ್ಕೆ ಹಚ್ಚಿದ್ದರಿಂದ ಅವನನ್ನು ಸಾಲೆಗೇ ಕಳಿಸಿರಲಿಲ್ಲ. ಧಾರವಾಡದಲ್ಲಿ ಇಂಥವನಿಗೆ ಉದ್ಯೋಗ ಸಿಗಬೇಕೆಲ್ಲಿ? ಗಿರಣಿಯ ಹೊರತು ಗತಿ ಇರಲಿಲ್ಲ. ಆದರೆ ಧಾರವಾಡದಲ್ಲಿ ಗಿರಣಿಗಳೂ ಇರಲಿಲ್ಲ. ಹೀಗಾಗಿ ಕಡೆಗೆ ತನ್ನ ಜಾತಿಯವರು ಮಾಡದ ಉದ್ಯೋಗಕ್ಕೆ ಮಗ ಕೈ ಹಾಕಿದ. ಅದೇ, ಬೀಡಿ ಕಾರಖಾನೆಯಲ್ಲಿ ಬೀಡಿ ಕಟ್ಟುವ ನೌಕರಿಯನ್ನು ಸಂಪಾದಿಸಿದ. ಬೀಡಿ ಕಟ್ಟುವುದರಲ್ಲಿ ಆತ ನಿಪುಣನಾದ. ದಿನಕ್ಕೆ ೨ ಸಾವಿರ ಬೀಡಿ ಕಟ್ಟುವಷ್ಟು ಅವನು ತರಬೇತು ಹೊಂದಿದ. ಅವನ ಸಂಪಾದನೆಯಲ್ಲಿ ತಮ್ಮಿಬ್ಬರ ಹೊಟ್ಟೆ ತುಂಬುತ್ತಿತ್ತು—ಆದರೆ ಬೀಡಿ ಕಟ್ಟುವ ಯಂತ್ರ ಬಂದಂದಿನಿಂದ ಅವನು ನಿರುದ್ಯೋಗಿಯಾದ. ಎಲ್ಲಿಯೂ ಗತಿಗಾಣದವನಾದ. ತನ್ನೊಬ್ಬನದೇ ಅಲ್ಲ; ಅದರ ಜತೆಯಲ್ಲಿ ತನ್ನ ತಾಯಿಯ ಹಸಿದ ಹೊಟ್ಟೆಯೂ ಅವನಿಗೆ ಭೂತಾಕಾರವಾಗಿ ಕಂಡಿರಬೇಕು—ಕಡೆಗೆ ಬಳಲಿ ಬೆಂಡಾಗಿ ಬಾಂವಿಯಲ್ಲಿ ಬಿದ್ದ—ಅಯ್ಯೋ ಮಶಿನ್ನು; ಅದನ್ನು ಹುಡುಕಿದ ಪಶು, ರಾಕ್ಷಸ. ಅವನಿಗೆ ಧಿಕ್ಕಾರ! ಹಾಲಿಗಾಗಿ ಮೊಲೆ ಕೊಟ್ಟರೆ ರಕ್ತ ಹೀರಬೇಕೇ ?—

ಮುದುಕಿ ಸುಬ್ಬಮ್ಮ ಕಣ್ಣು ತೆರೆದಳು. ಅವಳ ಕಣ್ಣೆದುರಿನಲ್ಲಿ ರಾಜನಂಥ ಅಸಂಖ್ಯ ರಾಕ್ಷಸರು ಅವಳನ್ನು ಹಿಡಿಯಲು ಬಂದಂತೆ ಭಾಸವಾಯಿತು. ಒಮ್ಮೆಲೆ ಹೌಹಾರಿದವಳಂತೇ ಚೀರಿಬಿಟ್ಟಳು.

"ಪಶು– ರಾಕ್ಷಸ— ಧಿಕ್ಕಾರ! ....

ಮುದುಕಿಯ ಚೀತ್ಕಾರ ದೂರ ನಿಂತಿದ್ದ, ಕೂಲಿಕಾರರ ತಂಡವನ್ನು ಕೆರಳಿಸಿತು. ಮತ್ತೆ ಅದೇ ಘೋಷಣೆ ಕೇಳಿಸಿತು.

“ ಪಶು ರಾಕ್ಷಸ– ಧಿಕ್ಕಾರ ”

ಪೋಲಿಸರ ಪಡೆ ಆ ತಂಡದತ್ತ ಧಾವಿಸಿತು. ಕ್ಷಣಮಾತ್ರದಲ್ಲಿ ಮತ್ತೆ ಶಾಂತತೆ ನೆಲಸಿತು. ಯಾಂತ್ರಿಕ ಸಾಧನದ ಬಲದ ಮೇಲೆಯೇ ಆ ಶಾಂತಿ ನೆಲಸಿತ್ತು. ಆದರೆ ಅದು ಸ್ಮಶಾನ ಶಾಂತಿಯಾಗಿ ಕಾಣುತ್ತಿತ್ತು.

ಪೋಲಿಸ ಹವಾಲ್ದಾರ ಮುದುಕಿಯ ಹತ್ತಿರ ಬಂದು ಅವಳನ್ನು ಎಚ್ಚರಿಸಿದ:

“ ಏ ಮುದಕೀ ಎತ್ಲಾಗ ನೋಡತಿ? ಆ ಕೊಳವಿ ಕಡೆ ನೋಡು, ಒಳಗ ಮಾತಾಡಿದ್ದು ಇಲ್ಲಿ ಕೇಳಸ್ತೈತಿ ! ”

ಸುಬ್ಬಮ್ಮ ನಿರ್ಜೀವ ಯಂತ್ರದಂತೆ ತನ್ನ ಕಿವಿಗಳನ್ನು ಧ್ವನಿವಾಹಕ ಕರ್ಣಗಳತ್ತ ಹೊರಳಿಸಿದಳು.

ರಾಜನ ಭಾಷಣ ಅಲ್ಲಿ ಕೇಳುತ್ತಿತ್ತು : “ —ನಾನು ಈಗ ದೊಡ್ಡ ವಿಜ್ಞಾನಿಯಾಗಿ ಬಂದಿಲ್ಲ, ದೊಡ್ಡ ಸಂಶೋಧಕನಾಗಿ ಬಂದಿಲ್ಲ; ನಿಮ್ಮ ಊರವನಾಗಿ ಬಂದಿದ್ದೇನೆ. ನಿಮ್ಮವನಾಗಿ ಬಂದಿದ್ದೇನೆ. ನಮ್ಮ ಪ್ರಾಂತದವರು ಪರರಿಗೆ ಉಪಕಾರ ಮಾಡುವುದರಲ್ಲಿ ಹೆಸರಾಗಿದ್ದಾರೆ. ಈಗ ನಾನು ಹೊಸ ಯಂತ್ರದ ರಚನೆಯನ್ನು ಕಂಡು ಹಿಡಿದು ಪರರಿಗೆ ಉಪಕಾರ ಮಾಡಿದ್ದೇನೆ. ನಾನು ಕೂಡ ಇಂಥಹೇ ಉಪಕಾರದ ಮೇಲೆ ಬೆಳೆದು ಇಂದು ಈ ಉನ್ನತ ಪದವಿಗೇರಿದ್ದೇನೆ. ನಾನು ನನ್ನ ಆತ್ಮವೃತ್ತ ಹೇಳುತ್ತ ಕೂಡ್ರುವದಿಲ್ಲ. ಆದರೂ ನನ್ನ ಜೀವನದಲ್ಲಿ ನಡೆದ ಒಂದು ಭಾಗ ಹೇಳಲೇಬೇಕು. —ನಾನು ಹುಟ್ಟಿ ಮೂರು ದಿನಗಳಲ್ಲಿಯೇ ನನ್ನ ತಾಯಿಯನ್ನು ಕಳೆದುಕೊಂಡೆ. ಆಗ ನೆರೆಮನೆಯ ಹೆಣ್ಣು ಮಗಳೊಬ್ಬಳು— ಅವಳ ಹೆಸರು ಸುಬ್ಬಮ್ಮ.— ತನ್ನ ಒಂದು ವರುಷದ ಮಗುವನ್ನು ಬದಿಗಿರಿಸಿ ಆ ಮಗುವಿಗೆ ಅರೆಹೊಟ್ಟೆಯುಣಿಸಿ, ನನಗೆ ತನ್ನ ಎದೆ ಹಾಲುಣಿಸಿ ಬೆಳಸಿದಳು.— ”

ಸುಬ್ಬಮ್ಮನ ಕಣ್ಣುಗಳಲ್ಲಿ ನೀರು ಧಾರಾಳವಾಗಿ ಹರಿಯತೊಡಗಿತು. ಅವಳ ಸತ್ತ ಮಗುವಿನ ಭೂತ ಅವಳ ಎದುರು ನಿಂತು ಕೂಗಾಡತೊಡಗಿದಂತೆ ಭಾಸವಾಯಿತು. ಆ ಭೂತ ಕೂಗಿ ಕಿರುಚಿ ಹೇಳುತ್ತಿತ್ತು: “ ಅವ್ವಾ, ನೀನು ಸ್ವಂತ ಮಗನಿಗೆ ಹಾಲುಣಿಸಲಿಲ್ಲ. ಒಂದು ಹಾವಿಗೆ ಹಾಲು ಹಾಕಿದಿ ! ಹಲ್ಲು ಕೀಳಿಸುವ ಸಾಮರ್ಥ್ಯವು ಇದ್ದರಷ್ಟೇ ಹಾವಿಗೆ ಹಾಲೆರೆಯಬೇಕು ?

ನೀನು ಬಡವಿ, ಪರೋಪಕಾರ ಮಾಡಲು ಹೊರಟೆ! ನೀನು ಕುಡಿಸಿದ ಹಾಲಿನಿಂದ ಪುಷ್ಟಗೊಂಡ ಘಟಸರ್ಪ ನನ್ನನ್ನು ಕಚ್ಚಿತು! ಇನ್ನು ನಿನ್ನನ್ನೂ ಕಚ್ಚುತ್ತದೆ. ಎಚ್ಚರ! ಸೇಡು! ಸೇಡು!! ನೀನು ಈಗ ಸೇಡು ತೀರಿಸಿಕೊಂಡರೆ ನನಗೆ ಸಮಾಧಾನ!"

ಸುಬ್ಬಮ್ಮನ ಕಣ್ಣುಗಳು ಇದ್ದಕ್ಕಿದ್ದಂತೆಯೇ ಕೆಂಪಾದುವು. ಕ್ಷಣಕಾಲ ಅವಳ ಮುಖದ ಮೇಲಿಂದ ಪೈಶಾಚಿಕ ನಗುವೊಂದು ಮಿನುಗಿ ಮಾಯವಾಯಿತು. ಆ ನಿರಾಶೆಯ ನಗುವಿನಲ್ಲಿಯೇ "ಸೇಡು" ಎಂದುಸುರಿದಳು ಆಗ ಮುದುಕಿಯ ಮುದುಡಿಯಾದ ಮುಖದಲ್ಲಿಯೂ ಉಗ್ರಕಳೆ ಕುಣಿದಾಡತೊಡಗಿತು. ಒಮ್ಮೆ ಎದೆಯ ಮೇಲೆ ಸೆರಗಿನ ಒಳಗೆ ಕೈಯಾಡಿಸಿ, ಸಮಾಧಾನದ ಒಂದು ದೀರ್ಘಶ್ವಾಸವನ್ನು ಬಿಟ್ಟಳು. "—ಆ ಸುಬ್ಬಮ್ಮ—" ಲಾವುಡ್ ಸ್ಪೀಕರಿನಲ್ಲಿ ಕೇಳುತ್ತಿದ್ದ ರಾಜನ ಭಾಷಣ ಸುಬ್ಬಮ್ಮನನ್ನು ಎಚ್ಚರಿಸಿತು. ಸುಬ್ಬಮ್ಮ ಮತ್ತೆ ಧ್ವನಿವಾಹಕ ಕರ್ಣವತ್ತ ಕಿವಿಯನ್ನು ಹೊರಳಿಸಿದಳು. ರಾಜನ ಭಾಷಣ ನಡೆದೇ ಇತ್ತು

"—ಆ ಸುಬ್ಬಮ್ಮ ನನ್ನನ್ನು ಈಗ ಮರೆತಿರಬಹುದು. ಆದರೆ ನಾನು ಅವಳನ್ನು ಮರೆಯುವುದು ಅಸಾಧ್ಯ. ಸ್ವಂತದ ಹಿತದ ಕಡೆಗೆ ಹೆಚ್ಚು ಲಕ್ಷ್ಯ ಕೊಡದೆ ಪರೋಪಕಾರ ಧರ್ಮವನ್ನು ಪರಿಪಾಲಿಸಿದ ಸಾಧ್ವಿಯನ್ನು ಮರೆಯುವದೆಂತು ಸಾಧ್ಯ? ಅವಳನ್ನು ಈಗ ಯಾರಾದರೂ ಕರೆದು ತಂದರೆ, ನಾನು ಅವಳ ಕಾಲಿಗೆ ಬಿದ್ದು, ಧನ್ಯನಾಗುವೆ...."

ಸುಬ್ಬಮ್ಮನ ಹತ್ತಿರವೇ ನಿಂತಿದ್ದ ಪೋಲೀಸ ಹವಾಲ್ದಾರ, ರಾಜನ ಭಾಷಣ ಕೇಳುತ್ತಿರುವಂತೆ ಸ್ತಂಭೀಭೂತನಾದ. "ಈ ಮುದುಕಿಯನ್ನೇ ಇವರು ಹೊಗಳುತ್ತಿದ್ದಾರಲ್ಲ—ಇವಳನ್ನೇ ಒಯ್ದು ಅವರ ಮುಂದೆ ನಿಲ್ಲಿಸಿದರೆ ತನ್ನ ಶೀಘ್ರ ಕರ್ತವ್ಯಕ್ಕೆ ಅಧಿಕಾರಿಗಳು ಮೆಚ್ಚಿಯಾರು!" ಎಂದು ತನ್ನಷ್ಟಕ್ಕೆ ವಿಚಾರಿಸಿ, ಆ ಮುದುಕಿಯ ಬಳಿಸಾರಿ ಮೃದುವಾಗಿ ಮಾತಾಡಿದ:

"ಸುಬ್ಬಮ್ಮಾ, ನೋಡು, ಸಾಹೇಬರು ಏನು ಮಾತಾಡಿದರು ಕೇಳಿದ್ಯಾ?"

"ಕೇಳಿದ್ನೆಪಾ!" ನಿರ್ವಿಕಾರಳಾಗಿ ಮುದುಕಿ ಉತ್ತರಿಸಿದಳು.

" ನೀನೇ ಏನು ಸುಬ್ಬಮ್ಮಾ, ಸಾಹೇಬರನ್ನ ಸಣ್ಣಾಕಿದ್ರಾ ಸಾಕಿ ದಾಕಿ?"

" ಹೌದಪಾ!"

ಉತ್ತರವನ್ನು ಕೇಳಿದ ಪೋಲಿಸ ಹವಾಲ್ದಾರನ ಆನಂದಕ್ಕೆ ಮೇರೆಯೇ ಉಳಿಯಲಿಲ್ಲ. ಮತ್ತೆ ಕೇಳಿದ:

"ನಡೀ ಸುಬ್ಬಮ್ಮಾ, ಒಳಗ ನಡಿ! ಅವರ ದರ್ಶನ ಮಾಡಿಸು ಅಂತ ಕೇಳತಿದ್ದೆಲ್ಲ. ಮಾಡಿಸ್ತೀನಿ ನಡಿ!"

ಸುಬ್ಬಮ್ಮನಿಗೆ ಅದು ಬೇಕಾಗಿರಲಿಲ್ಲ. ಆದರೆ ಮರುಕ್ಷಣದಲ್ಲಿಯೇ ಮಗನ ಭೂತ "ನೋಡು" ಎಂದು ಹೇಳಿದಂತೆ ಭಾಸವಾಯಿತು. ಸುಬ್ಬಮ್ಮ ಮತ್ತೆ ಎದೆಯ ಮೇಲಣ ಸೆರಗಿನ ಒಳಗೆ ಕೈಯಾಡಿಸಿ "ನಿನ್ನ ಉಪಕಾರ ಭಾಳ ಆತಪಾ!" ಎಂದು ಪೋಲಿಸ ಹವಾಲ್ದಾರನ ಸಂಗಡ ಒಳಗೆ ನಡೆದಳು.

ಸಭಾಭವನದಲ್ಲಿ ಕಾಲಿಟ್ಟೊಡನೆಯೇ ಮುದುಕಿ ಸ್ತಂಭಿತಳಾದಳು. ಸೂಟು-ಬೂಟಿನಲ್ಲಿ ಕುಳಿತ ಸಭಿಕರು ತಿರಸ್ಕೃತ ದೃಷ್ಟಿಯಿಂದ ಮುದುಕಿಯನ್ನು ದೃಷ್ಟಿಸತೊಡಗಿದರು. ಅದೇ ಆಗ ರಾಜನ ಭಾಷಣ ಮುಗಿದಿತ್ತು. ಅಧ್ಯಕ್ಷರು ಹೂವಿನ ಹಾರ ಹಾಕುವವರಿದ್ದರು. ಅಷ್ಟರಲ್ಲಿ ಪೋಲಿಸ ಹವಾಲ್ದಾರ ಕೂಗಿ ಹೇಳಿದ:

" ಸಾಹೇಬರೇ, ಸುಬ್ಬಮ್ಮ ಬಂದಾಳರೀ; ನೀವು ಇದೇ ಈಗ ಕರೆದು ಕೊಂಡು ಬರಪಾ—ಅಂತ ಹೇಳಿದ್ದಿರಿ. ಅದಕ್ಕ ಕರಕೊಂಡು ಬಂದೀನರಿ "

ಸಭಿಕರೆಲ್ಲರೂ ಗಹಗಹಿಸಿ ನಕ್ಕರು. ಸುಬ್ಬಮ್ಮನ ಕಂಗಾಲ ಸ್ಥಿತಿಗೆ ಆ ನಗು ಇಮ್ಮಡಿ ಮುಮ್ಮಡಿಯಾಗುತ್ತಿತ್ತು. ಸುಬ್ಬಮ್ಮನ ಮೈಮೇಲಿನ ವಸ್ತ್ರಗಳು ದರಿದ್ರತೆಯ ಪತಾಕೆಗಳಂತೆ ಗಾಳಿಗೆ ಹಾರಾಡುತ್ತಿದ್ದುವು. ಅಧ್ಯಕ್ಷರು ಮೂಗು ಮುರಿದರು. ಸಭಿಕರೆಲ್ಲರೂ ಮತ್ತೊಮ್ಮೆ ತಿರಸ್ಕಾರ ಮಿಶ್ರಿತ ನಗೆಯನ್ನು ನಕ್ಕರು ಆ ನಗೆ ಸಭಾಭವನದ ತುಂಬ ಪ್ರತಿಧ್ವನಿಸಿತು.

ಆ ಅಟ್ಟಹಾಸದ ನಗು ಸುಬ್ಬಮ್ಮನಿಗೆ ತನ್ನ ಹೃದಯವನ್ನು ಇರಿದು ಹೋದಂತೆ ಭಾಸವಾಯಿತು. ಒಂದುಸಲ ತೀಕ್ಷ್ಣದೃಷ್ಟಿಯಿಂದ ರಾಜುವನ್ನು ನೋಡಿದಳು.

ರಾಜ ಏಳಬಯಸುತ್ತಿದ್ದರೂ, ಜನತೆಯ ನಗು ಅವನನ್ನು ಹಿಂದಕ್ಕೆ ಎಳೆಯಿತು. ತಮ್ಮಿಬ್ಬರಲ್ಲಿಯ ಅಂತರವನ್ನು ಅವನ ಮನಸ್ಸು ಅಳೆಯ ತೊಡಗಿತ್ತು.

ರಾಜುವಿನ ಹೇಡಿತನ ಸುಬ್ಬಮ್ಮನ ಲಕ್ಷ್ಯಕ್ಕೆ ಬಾರದೆ ಹೋಗಲಿಲ್ಲ. ಯಾವುದೋ ಒಂದು ಪಾಶವೀ ಧೈರ್ಯ ಅವಳಲ್ಲಿ ಸಂಚಾರವಾಯಿತು. ಆ ಕರ್ಕಶನಗುವಿನ ಮಧ್ಯದಲ್ಲಿಯೇ, ೪–೫ ಹೆಜ್ಜೆ ಸಭಾಸ್ಥಾನದಲ್ಲಿ ಮುಂದೆ ಸರಿದಳು. ಅವಳಿಗೆ ತಿಳಿಯದಹಾಗೆ ಅವಳ ಕೈ ಎದೆಯ ಮೇಲಣ ಸೆರಗಿನವರೆಗೆ ಹೋಯಿತು. ಅಲ್ಲಿಂದ ಅವಳ ಕೈಗೆ ಬಂದುದು ಗೇಣುದ್ದದ ಚೂರಿ.

ಇದ್ದಕ್ಕಿದ್ದಂತೆಯೇ ಸಭೆಯಲ್ಲಿ ಶಾಂತತೆ ವ್ಯಾಪಿಸಿತು ಸುಬ್ಬಮ್ಮ ಒಮ್ಮೆಲೇ ಚೀರಿದಳು :

“ ಹಾವಿಗೆ ಹಾಲುಣಿಸಿದೆ ! ನೀನು ಯಂತ್ರವನ್ನು ಹುಡುಕಿ ನನ್ನ ಮಗನನ್ನು ಕೊಂದೆ ! ನಾನು ನಿನಗೆ ಹಾಲಿಗಾಗಿ ಮೊಲೆ ಕೊಟ್ಟರೆ, ನೀನು ನನ್ನ ರಕ್ತಹೀರಿದೆ ! ಹಿಡೀ. ನಾನೂ ಸೇಡು ತಿರಿಸಿಕೊಳ್ಳುತ್ತೇನೆ !” ಆ ವಾಕ್ಯ ಮುಗಿಯುವ ಮೊದಲೇ ಕೈಯಲ್ಲಿಯ ಚೂರಿಯನ್ನು ರಾಜನತ್ತ ಸುಬ್ಬಮ್ಮ ಬೀಸಾಡಿದಳು. ಹೇಳಿ ಕೇಳಿ ಅವಳು ಮುದುಕಿ; ಗುರಿತಪ್ಪಿತು ರಾಜ ಕುಳಿತ ಖುರ್ಚಿಯ ಮೇಲ್ಭಾಗಕ್ಕೆ ಅದು ಬಡಿದಿತ್ತು.

ಸಭೆಯಲ್ಲಿ ಒಂದೇ ಕೋಲಾಹಲವೆದ್ದಿತು. ಸುಬ್ಬಮ್ಮನನ್ನು ಕರೆದು ತಂದ ಪೋಲೀಸ ಹವಾಲ್ದಾರನೇ ಅವಳನ್ನು ಬಂಧಿಸಿ, ಅವಳ ಕೈಗೆ ಬೇಡಿ ತೊಡಿಸಿ, ಅವಳನ್ನು ಹೊರಗೆ ಕರೆದುಕೊಂಡು ನಡೆದ. ಸುಬ್ಬಮ್ಮ ಮತ್ತೆ ಚೀರಿದಳು.

“ ಪಶು– ರಾಕ್ಷಸ. ಧಿಕ್ಕಾರ ! ” ಸುಬ್ಬಮ್ಮನನ್ನು ಸಭಾಭವನದಿಂದ ಹೊರಗೆ ಕರೆದೊಯ್ದ ಬಳಿಕ, ಸಭೆಯಲ್ಲಿಯ ಕೋಲಾಹಲ ಮಾಯವಾಯಿತು. ಆದರೆ ರಾಜ ದಂಗುಬಡೆದವನಂತೆ ಕುಳಿತುಬಿಟ್ಟಿದ್ದ. ರಾಜ ಅಪಾಯದಿಂದ ಪಾರಾದ ಬಗ್ಗೆ ಜನ ಅವನಿಗೆ ಅಭಿನಂದನೆಗಳನ್ನು ಅರ್ಪಿಸುತ್ತಿದ್ದರು. ಆದರೆ ರಾಜನ ಕಿವಿ... ? ತನ್ನ ಕಣ್ಣೆದುರಿನಲ್ಲಿ ಸುಬ್ಬಮ್ಮನಂತಹ ಸಹಸ್ರಾರು ಮುದುಕಿಯರು ತನ್ನತ್ತ ಕೈ ಮಾಡಿ ಅತ್ತ ಕರೆಯುತ್ತಿರುವಂತೆ ರಾಜನಿಗೆ ಭಾಸವಾಗ

ತೊಡಗಿತು. ರಾಜುವಿನ ಹೃದಯದಲ್ಲಿಯ ಹೊಯ್ದಾಟ ಆ ಸಹಸ್ರಾರು ಮುದುಕಿಯರ ಭೀಕರ ಕೂಗಿಗೆ ಹೆಚ್ಚಾಯಿತು. ಅದೇಹುಚ್ಚಿನಲ್ಲಿ ರಾಜ ತನ್ನ ಖುರ್ಚಿಯನ್ನು ಬಿಟ್ಟೆದ್ದ. ಜನ ಅವನನ್ನೇ ದಿಟ್ಟಿಸತೊಡಗಿದರು. ರಾಜನ ಕಣ್ಣೆದುರಿನಲ್ಲಿ ಮತ್ತೆ ನಿರುದ್ಯೋಗಿ ಪುತ್ರರನ್ನು ಕಳೆದುಕೊಂಡ ಮುದುಕಮಾತೆಯರ ಭೀಕರ ತಂಡ ಕಾಣಿಸಿದಂತೆ ಭಾಸವಾಯಿತು. ಆಗ ಪೂರ್ಣ ಎಚ್ಚರ ತಪ್ಪಿದ ರಾಜ, ಟೇಬಲ್ಲಿನ ಮೇಲಿರಿಸಿದ ಯಂತ್ರದ ಮಾದರಿಯನ್ನು ತನ್ನ ಎಡಗಾಲ ಬೂಟಿನಿಂದ ಒದೆದು ಬಿಟ್ಟ. ಯಂತ್ರ ಮುರಿದು ತುಂಡುತುಂಡಾಗಿ ಬಿದ್ದಿತು. ಕೂಡಿದ ಜನ ದಿಗ್ಭ್ರಾಂತರಾದರು. ಆ ಮಶಿನ್ನಿನ ಬಿದ್ದ ತುಂಡುಗಳು ಗಹಗಹಿಸಿ ನಕ್ಕು, ತನ್ನನ್ನು ಅಣಕಿಸುವಂತೆ ಭಾಸವಾಯಿತು.

“ಪಶು, ರಾಕ್ಷಸ– ಧಿಕ್ಕಾರ!” ಬಿದ್ದ ತುಂಡುಗಳ ಸಪ್ಪಳದಲ್ಲಿ ಈ ಶಬ್ದಗಳು ರಾಜನ ಕಿವಿಗೆ ಕೇಳಿಸುತ್ತಿದ್ದುವು.

---

# ಕಾಲ ಮಹಿಮೆ.



ತಮ್ಮ ಮಗಳು ಶೀಲಾ ತಂದ ಸುದ್ದಿಯಿಂದ ಕೇಶವರಾಯರು ಆನಂದ ಹೊಂದಿದ್ದರೂ, ಮನೆಯ ಹೊಸ್ತಿಲನ್ನು ದಾಟಿ ಬೀದಿಗೆ ಇಳಿಯುವ ಮೊದಲೇ ಕಾಗೆಯೊಂದು ಬಲದಿಂದ ಎಡಬದಿಗೆ ಹಾರಿಹೋದದ್ದನ್ನು ಕಂಡು, ಅವರ ಮನಸ್ಸು ಸ್ವಲ್ಪ ಅಸ್ತವ್ಯಸ್ತವಾಯಿತು. ಹಕ್ಕಿಗಳ ಹಾರಾಟದ ಶಕುನಾಪ ಶಕುನಗಳನ್ನು ಎಣಿಸುವಷ್ಟು ಸನಾತನ ಶೀಲರಾಗಿರಲಿಲ್ಲ ಕೇಶವರಾಯರು. ಆದರೂ ಮಾಡಹೊರಟ ಕೆಲಸವೇ ಅಷ್ಟೊಂದು ಮಹತ್ವದ್ದಿತ್ತು. ಅನ್ನಿ -

ದಿನವೂ ಶಾಲೆಗೆ ಹೋಗುವ ವಿದ್ಯಾರ್ಥಿ, ಮನೆ ಬಿಟ್ಟ ಕ್ಷಣ, ಎದುರು ಯಾರು ಬಂದರು ಎಂಬುದನ್ನು ಪರಿಗಣಿಸಲಾರ. ಆದರೆ ಪರೀಕ್ಷೆಯ ದಿನ ಮಾತ್ರ, ಎದುರಿಗೆ ಬಂದ ವ್ಯಕ್ತಿಯನ್ನು ದೃಷ್ಟಿಸಿ ಅದರ ಮೇಲಿಂದ ತನ್ನ ಶಕುನಾಪಶಕುನದ ಫಲಗಳನ್ನು ಕಟ್ಟುತ್ತಾನಲ್ಲವೇ ?

ಹಾಗೇ ಕೇಶವರಾಯರು ಈ ಮೊದಲು ಎಷ್ಟೋ ಸಲ ಮನೆ ಬಿಟ್ಟು ಹೊರಬಿದ್ದುದೂ ಉಂಟು. ಆದರೆ ಎಂದೂ ಶಕುನಾಪಶಕುನದತ್ತ ಲಕ್ಷವನ್ನೇ ಕೊಡದವರು ಇಂದೇಕೋ, ಆ ಬದಿಗೆ ತಮ್ಮ ಲಕ್ಷವನ್ನು ಹರಿಸಿದ್ದರು.

" ಎಲಾ ನಿನ್ನ " ಎಂದು ತಮ್ಮಷ್ಟಕ್ಕೆ ತಾವೇ ಮನಸ್ಸಿನಲ್ಲಿ ಆ ಕಾಗೆಯನ್ನು ಶಪಿಸುತ್ತ ಹಾಗೇ ಮುಂದುವರಿದರು.

ದಾರಿಯುದ್ದಕ್ಕೂ ನಡೆದಂತೆ ನಿರಾಶೆ ಅವರನ್ನು ಮುತ್ತತೊಡಗಿತ್ತು. ಕಾಗೆ ಎಡಗಟ್ಟಿದುದರ ಪರಿಣಾಮ ಅದು. ಆದರೂ ಅವರಲ್ಲಿಯ ಸುಧಾರ ಕತೆ, ಅವರ ಮನಸ್ಸಿಗೆ ಸಮಾಧಾನ ತಂದುಕೊಟ್ಟು ಆ ಸ್ಥಿತಿಯನ್ನು ಹೊಡೆ ದೋಡಿಸುತ್ತಿತ್ತು. ಅಕ್ಕಪಕ್ಕದಲ್ಲಿ ನಡೆವ ಜನರ ಚಲನವಲನದತ್ತ ಅವರ ಲಕ್ಷವೇ ಇರಲಿಲ್ಲ. ನಡಿಗೆಯಲ್ಲಿ ಸ್ವಲ್ಪ ಶೀಘ್ರತೆಯನ್ನು ತಂದು ದಾರಿಯನ್ನು

ಆಕ್ರಮಿಸತೊಡಗಿದರು. ಅವರ ಮನಸ್ಸಿನ ಮುಂದೆ ಕುಣಿಯುತ್ತಿದ್ದುದು ಅವರ ಮಗಳು ಶೀಲೆಯ ಮದುವೆಯ ಸಮಸ್ಯೆ.

ಹಾಗೆ ನೋಡಿದರೆ ಕೇಶವರಾಯರಿಗೆ ತಮ್ಮ ಮಗಳ ಲಗ್ನದ ಚಿಂತೆಯೇ ಇರಲಿಲ್ಲ. ಶೀಲೆ ಮತ್ತು ವಸಂತನ ಪ್ರೇಮ ಬೆಳೆದು ಬಂದುದು ಅವರಿಗೆ ಗೊತ್ತಿತ್ತು. ಅವರಿಬ್ಬರು ಈ ಮೊದಲೇ ಪರಸ್ಪರರು ವಚನದದ್ಧರಾದುದೂ ಅವರಿಗೆ ಗೊತ್ತಿತ್ತು. ವಸಂತ ಕೇಶವರಾಯರಿಗೆ ಅಪರಿಚಿತನಲ್ಲ. ದೂರಿನ ವನೂ ಅಲ್ಲ, ವಸಂತ ಅವರ ಸೋದರಳಿಯ. ತಾಯಿಯನ್ನು ಕಳೆದುಕೊಂಡ ನಂತರ ವಸಂತ ಸ್ವಲ್ಪ ದೂರಿನವನಾಗಿದ್ದ. ಆದರೂ ವಸಂತನ ತಂದೆ ಮಾಧವರಾಯರು, ಕೇಶವರಾಯರಿಗೆ ಸ್ನೇಹಿತರಾಗಿಯೇ ಉಳಿದಿದ್ದರು. ನಡುವಿನ ಸೇತುವೆ ಮುರಿದಷ್ಟಕ್ಕೆ ಸಂಬಂಧ ಬಿಡಬಾರದೆಂದು, ಮಾಧವ ರಾಯರು ತಮ್ಮ ಹೆಂಡತಿ ತೀರಿದ ನಂತರ ತಮ್ಮ ಮಗ ವಸಂತನಿಗೆ, ಕೇಶವ ರಾಯರ ಮಗಳು ಶೀಲೆಯನ್ನು ತೆಗೆದುಕೊಂಡು, ಮುರಿದುಹೋದ ಸಂಬಂಧ ವನ್ನು ಭದ್ರಪಡಿಸಬೇಕೆಂದು ನಿಶ್ಚಯಿಸಿದ್ದರು. ಅವರ ಈ ಇಚ್ಛೆಯಿಂದ ಕೇಶವರಾಯರ ತಲೆಯ ಮೇಲಿನ ದೊಡ್ಡ ಭಾರ ಇಳಿದಂತಾಗಿತ್ತು.

ಇದೆಲ್ಲಕ್ಕೂ ಕಾರಣವೆಂದರೆ, ಕೇಶವರಾಯರ ಮತ್ತು ಮಾಧವರಾಯರ ಅನ್ಯೋನ್ಯ ಸ್ನೇಹ ಸಂಬಂಧ. ಮೇಲಾಗಿ ಇಬ್ಬರೂ ಸಮದುಃಖಿಗಳು. ಇಬ್ಬರೂ ಅಷ್ಟು ಸಿರಿವಂತರಾಗಿರಲಿಲ್ಲ. ಅವರಿಬ್ಬರೂ ಅದೇ ಊರಲ್ಲಿ ಬೇರೆ ಬೇರೆ ಕಚೇರಿಯಲ್ಲಿ ಕಾರಕೂನರಾಗಿದ್ದರು. ಈ ಮೊದಲು ಇಬ್ಬರೂ ಒಂದೇ ಓಣಿಯಲ್ಲಿ ಅಕ್ಕಪಕ್ಕದವರಾಗಿಯೇ ಇರುತ್ತಿದ್ದರು. ಆಗಿನಿಂದಲೇ ವಸಂತ ಮತ್ತು ಶೀಲೆಯರಲ್ಲಿ ಹೆಚ್ಚು ಸ್ನೇಹ ಬೆಳೆದು ಬಂದಿತ್ತು. ಮೇಲಾಗಿ ತಮ್ಮಿಬ್ಬರ ಮದುವೆಯಾಗುವದೇ ಖಂಡಿತ ಎಂಬುದು ಇಬ್ಬರಿಗೂ ಗೊತ್ತಾಗಿದ್ದರಿಂದ, ಅವರ ಸ್ನೇಹ, ಪರಿಚಯ, ಪ್ರೇಮಕ್ಕೆ ಯಾವ ಬಂಧನವೂ ಇರಲಿಲ್ಲ. ಇದೆಲ್ಲ ೫ ವರುಷಗಳ ಹಿಂದಿನ ವರೆಗೆ ಸುಸೂತ್ರವಾಗಿ ಸಾಗಿತ್ತು. ಮುಂದೆ ಮಾತ್ರ ಜಗತ್ತಿನಲ್ಲಿ ಮಹಾಯುದ್ಧ ಪ್ರಾರಂಭವಾಯಿತು. ಮಧ್ಯಮ ವರ್ಗದ ಜನ ಚಡಪಡಿಸಲಾರಂಭಿಸಿದರು. ಬಂದ ಪಗಾರವನ್ನು ಹೊಟ್ಟೆಗಾಗಿ ವೆಚ್ಚ ಮಾಡಿದರೆ, ಬಟ್ಟೆಗೆ ಕೊರತೆ ಬಿದ್ದು ಬತ್ತಲೇ ಇರುವ ಪ್ರಸಂಗ. ಬಟ್ಟೆಗೆ ವೆಚ್ಚ ಮಾಡಿದರೆ ಬರೀಹೊಟ್ಟೆಯಿಂದಿರಬೇಕಾದ ಪ್ರಸಂಗ ಅವರಿಗೆ ಬರ

ತೊಡಗಿದವು. ಆದರೆ ಹೊಟ್ಟೆಬಟ್ಟೆಗಳನ್ನು ಪುಕ್ಕಟೆ ನೋಡಿಕೊಂಡು ಮೇಲೆ ಮತ್ತೆ ರೂಪಾಯಿಗಳನ್ನು ಕೊಡುವ ಮಹಾಯುದ್ಧ ಇಂಥ ಮಧ್ಯಮ ವರ್ಗದ ವರಿಗೊಂದು ಮಹಾದ್ವಾರವನ್ನೇ ತೆರೆಯಿಸಿತು. ೧೯೩೯ ನೇ ಇಸ್ವಿ ಕೆಲವರಿಗೆ ಕಷ್ಟ ತಂದೊಡ್ಡಿದರೂ ಇನ್ನು ಕೆಲವರಿಗೆ ಸಂತೋಷಗೊಳಿಸಿತು. ಇದು ಮಹಾಯುದ್ಧದ ಮೋಡಗಳ ಮರೆಯಲ್ಲಿ ಅವಿತ ಸುಂದರ ಸೌದಾಮಿನಿ.

ಕಾರಕೂನಿಕೆಯಲ್ಲಿ ಬೇಸತ್ತು ಹೋದ ಮಾಧವರಾಯರು, ತಮ್ಮ ಮಗ ವಸಂತನನ್ನು ನಿರ್ಭಯರಾಗಿ ಸೈನ್ಯಖಾತೆಗೆ ಕಳಿಸಿಬಿಟ್ಟರು. ಕೇಶವ ರಾಯರಿಗೂ ಮಗಳಿರುವ ಬದಲು ಮಗನೇ ಇದ್ದಿದ್ದರೆ, ಅವರೂ ಮಾಧವ ರಾಯರ ಮಾರ್ಗವನ್ನೇ ಅವಲಂಬಿಸುತ್ತಿದ್ದರು. ಆದರೆ ದುರ್ದೈವಕ್ಕೆ ಅವರು ಹೆಣ್ಣಿನ ತಂದೆಯಾಗಿದ್ದರು. ಆದೂ ಹಿಂದ ಸ್ಥಾನದಲ್ಲಿ, ಮೇಲಾಗಿ ಕರ್ನಾ ಟಕದಲ್ಲಿ.

ವಸಂತ ಸೈನ್ಯ ಖಾತೆಯನ್ನು ಸೇರಿದಂದಿನಿಂದ, ಮಾಧವರಾಯರಿಗೆ ಶುಕ್ರದೆಸೆ ಪ್ರಾರಂಭವಾಯಿತು ಮನೆಯಲ್ಲಿ ಊಟಉಪಚಾರದ ಖರ್ಚು ತಪ್ಪೊಬ್ಬರದೇ. ಆದರೆ ಬರುವ ಸಂಬಳ ಇಮ್ಮಡಿಯಾಯಿತು. ವಸಂತ ನಿಂದ ಪ್ರತಿತಿಂಗಳು ತಪ್ಪದೇ ದುಡ್ಡು ಬರುತ್ತಿತ್ತು. ಮುಂದೆ ಅವನು ಇಟಲಿ ರಣರಂಗಕ್ಕೆ ಹೋದಮೇಲೆಯೂ ಮೊದಲಿನಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಫ್ಯಾಮಿಲಿ ಅಲಾಟಮೆಂಟ ಬರತೊಡಗಿತು. ಇದೆಲ್ಲದರ ಪರಿಣಾಮದಿಂದ ಮಾಧವರಾಯರ ಇರುವಿನಲ್ಲಿ ಕೊಂಚ ಮಾರ್ಪಾಟಾಗತೊಡಗಿತು. ಅವರು ಊರೊಳಗಿನ ಬಾಡಿಗೆ ಮನೆ ಬಿಟ್ಟು ಮಾಳಮರಡಿಯಲ್ಲಿ ಮನೆಯನ್ನು ಬಾಡಿ ಗೆಗೆ ತೆಗೆದುಕೊಂಡರು. ಮುಂದೆ ವಸಂತ ಇಟಲಿಯಲ್ಲಿ ತುಂಬ ಶೌರ್ಯದಿಂದ ಕಾದುದರ ಪರಿಣಾಮವಾಗಿ ಅವನಿಗೆ M. B. E. ಪದವಿ ದೊರಕಿತು.

ಈ ಪದವಿಯ ಬಲದಿಂದ ಮಾಧವರಾಯರು ಮಾಳಮರಡಿಯಲ್ಲಿ ಒಂದು ಬಂಗಲೆಯನ್ನೇ ಮಾರಲಿಕ್ಕೆ ತೆಗೆದುಕೊಂಡು ಇರತೊಡಗಿದರು. ಇದೆಲ್ಲ ಮಾರ್ಪಾಡು ಕೇಶವರಾಯರು ತಮ್ಮ ಕಣ್ಣುಗಳಿಂದಲೇ ನೋಡಿ ದ್ದರು. ಆದರ ವಿರುದ್ಧ ರೀತಿಯಲ್ಲಿ ತಮ್ಮ ಅವನತಿಯಾಗುತ್ತಿರುವದನ್ನು ಅವರು ಗಮನಿಸಿದ್ದರು. ಬೆಲೆಗಳು ಏರಿದರೂ ತಮ್ಮ ಸಂಬಳ ಬೆಳೆಯುವ ಲಕ್ಷಣಗಳೇ ಅವರಿಗೆ ತೋರುತ್ತಿರಲಿಲ್ಲ. ತನ್ನ ಮತ್ತು ಮಗಳ ಹೊಟ್ಟೆ

ಬಟ್ಟೆಗೆ ಎಲ್ಲ ಸಂಬಳ, ಮುಗಿದು ಹೋಗುತ್ತಿತ್ತು. ಪ್ರತಿ ತಿಂಗಳು ಮನೆಯ ಬಾಡಿಗೆಯನ್ನು ಕೊಡುವದು ಅವರಿಗೆ ದುಸ್ತರವಾಗುತ್ತಿತ್ತು. ಇಂಥ ಪರಿಸ್ಥಿತಿಯಲ್ಲಿ ಮಾಧವರಾಯರ ಹಾಗೆ ತಾವೂ ಮನೆ ಕೊಳ್ಳುವ ಮಾತು ಅವರಾಡುವದು ಸಾಧ್ಯವಿರಲಿಲ್ಲ. ಒಂದು ವೇಳೆ ಅವರು ಆಡಬೇಕೆಂದಿದ್ದರೆ, ಅವರನ್ನು ಜನ ಹುಚ್ಚರಲ್ಲಿ ಎಣಿಸುತ್ತಿದ್ದರೆಂಬುದಕ್ಕೆ ಸಂದೇಹವೇ ಇಲ್ಲ.

ಆದರೂ ಕೇಶವರಾಯರಿಗೆ ಒಂದು ಸಮಾಧಾನವಾಗಿತ್ತು. ತಾವು ಸಿರಿವಂತರಾಗಲಿಲ್ಲವಾದರೂ ತನ್ನ ಳಿಯನಾದರೂ ಆ ಸುಟ್ಟವನ್ನು ಮುಟ್ಟಿದನಲ್ಲಾ ಎಂದು ಶೀಲೆಯ ಸುಂದರ ಭವಿತವ್ಯದ ಸ್ವಪ್ನ ಅವರಿಗೆ ಅಂಥ ಬಡತನದಲ್ಲಿಯೂ ಆನಂದ ತಂದು ಕೊಡುತ್ತಿತ್ತು.

ಆ ಕನಸು ಇಂದು ನನಸಾಗುವದರಲ್ಲಿದೆ. ವಸಂತ ಇಂದು ೫ ವರುಷಗಳ ನಂತರ ಇಟಲಿ ರಣರಂಗದಿಂದ, ರಜೆಯನ್ನು ಪಡೆದುಕೊಂಡು ಮನೆಗೆ ಬಂದ ಸುದ್ದಿ ಕೇಳಿ ಕೇಶವರಾಯರು ಮಾಧವರಾಯರ ಮನೆಯತ್ತ ಶೀಲೆಯ ಮದುವೆಯ ಮಾತನ್ನಾಡುವದಕ್ಕೆ ನಡೆದಿದ್ದರು ಈ ಐಯ್ದು ವರುಷಗಳ ಅವಧಿಯಲ್ಲಿ ಕೇಶವರಾಯರಿಗೆ ಮಾಧವರಾಯರು ಎರಡು ಮೂರು ಸಲ ಭೆಟ್ಟಿಯಾಗಿದ್ದರು "ಮನೆ ದೂರಾಗಿದೆ" ಎಂಬ ನೆಪ ಹೇಳಿ ತಮ್ಮ ಅಪರೂಪತೆಯನ್ನು ಮಾಧವರಾಯರು ಮರೆಮಾಡಿಕೊಳ್ಳುತ್ತಿದ್ದರು.

ದಾರಿಯುದ್ದಕ್ಕೂ ನಡೆದಂತೆ ಕೇಶವರಾಯರ ಮನಸ್ಸಿನ ಮುಂದೆ ಹಿಂದಿನ ಈ ಕಥೆಯೆಲ್ಲ, ಚಲಚ್ಚಿತ್ರದಂತೆ ನುಸುಳಿ ಮಾಯವಾಯಿತು. ಈ ವೇಳೆಗಾಗಲೇ ಅವರು ಮಾಧವರಾಯರ ಬಂಗಲೆಯ ಗೇಟಿಗೆ ಬಂದಿದ್ದರು. ಮಾಧವರಾಯರ ಮನೆಯ ಬಾಗಿಲು ವಾಡಿಕೆಯಂತೆ ಮುಚ್ಚಿತ್ತು. ಅದೂ ಒಂದು ಕೇಶವರಾಯರಿಗೆ ಅಪಶಕುನವಾಗಿ ತೋರಿತು. ಆದರೂ ಬಾಗಿಲನಲ್ಲಿಯೇ ಇದ್ದ ಕಾಲ್ ಬೆಲ್ (ಕರೆಯುವ ಗಂಟೆ) ಕಂಡು ಧೈರ್ಯ ತಂದುಕೊಂಡು ಅದರ ಬಿರಡೆಯನ್ನು ಅದುಮಿದರು. ಬಿರಡೆಯನ್ನು ಅದಮುವಾಗ ತಮ್ಮ ಕೈಗಳು ನಡುಗುತ್ತಿರುವುದು ಅವರ ಲಕ್ಷಕ್ಕೆ ಬಂದಿತು. ಎಷ್ಟೆಂದರೂ ತಾನು ಹೆಣ್ಣಿನ ತಂದೆಯಲ್ಲವೇ ಎಂದು ಸಮಾಧಾನ ತಂದುಕೊಂಡರು.

ಮರುಕ್ಷಣ ಬಾಗಿಲು ತೆರೆಯಿತು. ಬಾಗಿಲು ತೆಗೆದವನು ...

ಆಗಿರಲಿಲ್ಲ ವಸಂತನೇ ಬಾಗಿಲನ್ನು ತೆಗೆದಿದ್ದ ಆದರೆ ಕೇಶವರಾಯರು ಅವನನ್ನು ಮೊದಲು ಗುರುತಿಸದೇ ಹೋದರು. ವಸಂತನಲ್ಲಿ ಅಷ್ಟೊಂದು ಮಾರ್ಪಾಡು ಆಗಿ ಹೋಗಿತ್ತು. ಆದರೂ ತಮ್ಮ ಸೋದರಳಿಯನನ್ನು ಗುರುತಿಸುವದು ಅಸಾಧ್ಯವೇ? ಕೇಶವರಾಯರು ಅವನನ್ನು ಗುರುತಿಸಿ ಸಾವೋಪಚಾರವಾಗಿ ಮಾತನಾಡಿಸಿದರು:

"ವಸಂತಾ, ಎಷ್ಟು ಸುಂದರನಾಗಿ ಬಿಟ್ಟಿದ್ದೀಯಪಾ, ಯಾವಾಗ ಬಂದೆ?"

"ತಾವು ಯಾರು?"

ವಸಂತನ ಈ ಪ್ರಶ್ನೆಯಿಂದ ಕೇಶವರಾಯರು ನೆಲಕ್ಕೇ ಇಳಿದುಬಿಟ್ಟರು. ಆದರೂ ತಮ್ಮನ್ನು ಸಾವರಿಸಿಕೊಂಡು ಮತ್ತೆ ತೊದಲುತ್ತ ಹೇಳಿದರು:

"ನಾನು ಕೇಶವರಾಯಾ, ನಿನ್ನ ಮಾವಾ, ಏನು ಗುರುತು ಹತ್ತಲಿಲ್ಲೇನು?"

"ಓಹೋ, ಕೇಶೂಮಾಮಾ ಏನು? ಬರ್‍ರಿ ಒಳಗ." ಎಂದು ಹೇಳಿ ಒಳಗೆ ಕರದೊಯ್ದು, ಕೂಡಿಸಿ, ಮತ್ತೆ—

"ಕೂಡ್ರಿ. ನಾಯೀಗ ಅಪ್ಪನ್ನ ಕರಕೊಂಡು ಬರ್‍ತೇನಿ" ಎಂದು ಹೇಳಿ ವಸಂತ ಒಳಗೆ ಹೋದ.

ಮುಂದೆ ೫ ನಿಮಿಷಗಳ ನಂತರ ಮಾಧವರಾಯರು ಹೊರಬಂದು ಬದಿಯಲ್ಲಿಯೇ ಕುಳಿತರು. ನಮಸ್ಕಾರ ಕ್ಷೇಮಸಮಾಚಾರದ ಮಾತು ಮುಗಿದ ಮೇಲೆ ಕೇಶವರಾಯರೇ ತಮ್ಮ ಮುಖ್ಯ ಮಾತಿನತ್ತ ಹೊರಳಿದರು.

"ಈಗ ವಸಂತ ಹ್ಯಾಂಗಾದರೂ ೪ ತಿಂಗಳ ರಜಾತಗೊಂಡು ಬಂದಾನ ಮತ್ತು ಈಗ ಕಾರ್ತಿಕ ಮಾಸ, ಶುಭ ಮುಹೂರ್ತ ನೋಡಿ ಮದುವಿ ಮಾಡಿ ಬಿಡೋಣ."

"ಮದುವಿ, ಯಾರ ಕೂಡೋ? ಕನ್ಯಾ ಗಿನ್ಯಾ ಠರಾಯಿಸದೇ. ಲಗ್ನ ಒಮ್ಮೆಲೆ ಆಗಂದ್ರ ಹ್ಯಾಂಗಪಾ. ಈಗ ಎರಡು ಮೂರು ಕನ್ಯಾ ಬಂದು ಹೋಗ್ಯಾವ. ಕನ್ಯಾ ಇನ್ನೂ ಅವನ ಮನಸಿಗೆ ಬಂದಿಲ್ಲ. ವರದಕ್ಷಿಣೇನೂ ನನ್ನ ಮನಸಿಗೆ ಬಂದಿಲ್ಲ."

ಮಾಧವರಾಯರ ಈ ಮಾತು ಕೇಳಿದಂತೂ ಕೇಶವರಾಯರು ಅಲ್ಲಿಯೆ ಪ್ರಾಣ ಬಿಡುವ ಸ್ಥಿತಿಗೆ ಬಂದರು. ಆದರೇನು, ಅವರು ಅಷ್ಟು ಪುಣ್ಯವಂತ ರಲ್ಲವೇನೋ, ಜೀವಂತರಾಗಿಯೇ ಉಳಿದಿದ್ದರು. ನಿರಾಶೆಯ ಧ್ವನಿಯಲ್ಲಿಯೆ ಕೇಶವರಾಯರು ಬಿನ್ನವಿಸಿಕೊಂಡರು:

"ಮಾಧೂ, ನೀ ಹಿಂಗ ಮಾತಾಡೀಅಂತ ಕಲ್ಪನಾ ಇರಲಿಲ್ಲಪಾ ನನಗ. ಹಿಂದ, ನಾವಿಬ್ಬರೂ ಠರಾಯಿಸಿಕೊಂಡದ್ದು ಮರತಿ ಏನು? ಅದನ್ನು ಮರೆ ತರೂ ವಸಂತ, ಶೀಲಾ ಇಬ್ಬರೂ ಒಬ್ಬರವ್ಯಾಲೊಬ್ಬರು ಎಷ್ಟು ಪ್ರೇಮ ದಿಂದ ಇದ್ದಾರ ಅನ್ನೋದು ನಿನಗ ಗೊತ್ತದ. ಅವರ ಪವಿತ್ರ ಪ್ರೇಮದ ಸಲುವಾಗಿಯಾದರೂ ನೀವು ಈ ಲಗ್ನಕ್ಕೆ ಒಪ್ಪಬೇಕು."

ಅವರ ಮಾತಿನತ್ತ ಲಕ್ಷಗೊಡದೆ "ಪ್ರೇಮ ಗೀಮ ನನಗ ಗೊತ್ತಿಲ್ಲ. ಅದನ್ನ ಅವಗ ಕೇಳಿಕೋ" ಎಂದು ಮಾಧವರಾಯರು ಒಳ ನಡೆದು ಬಿಟ್ಟರು. ಅವರ ಬೆನ್ನಹಿಂದೆಯೇ ಬಂದು ನಿಂತಿದ್ದ ವಸಂತ, ಅಪ್ಪನ ಮಾತು ಮುಗಿದಾಕ್ಷಣ, ಖಡಾಖಂಡಿತವಾಗಿ ಹೇಳಿಬಿಟ್ಟ:

"ಸಣ್ಣ ಹುಡುಗರು ಆಟಾ ಆಡೂ ಮುಂದ ಲಗ್ನ ಮಾಡತಿರ್ತಾರ ಅಂತ ಹೇಳಿ, ಅದು ಖರೇ ಅಂತ ತಿಳಿಯೋದೇನು ಮಾಮಾ." ನನಗ ಈಗ ಐದು ಸಾವಿರರೂಪಾಯಿ ವರದಕ್ಷಿಣಿ ಕೊಡಲಿಕ್ಕೆ ತಯಾರಾಗೇದ ಮಂದಿ. ಅದ ಏನು ನಿನ್ನ ತಾಕತ್ತು. ನಾ ಈಗ ಕ್ಯಾಪ್ಟನ್ ವಸಂತ ಆಗೇನಿ. ನನ್ನ ಅಂತಸ್ತಿಗೆ ಸರಿಯಾಗಿ ಆಗಬೇಕಲ್ಲ."

"ಮನುಷ್ಯತ್ವದ ಮುಂದ ಅಂತಸ್ತು ಗಿಂತಸ್ತು ಸುಳ್ಳಪಾ. ನನಗ ಅಂತಸ್ತು ಅಂದರ ಏನಂಬುದೇ ಗೊತ್ತಿಲ್ಲಪ್ಪಾ."

"ಅದು ಗೊತ್ತಿದ್ದರ ನೀ ಇಲ್ಲೀ ತನಕಾ ಬರ್ತಿದ್ದಿಲ್ಲ."

ಆ ಉತ್ತರದಿಂದ ಕೇಶವರಾಯರು ಸಂತಪ್ತರಾಗಿ ಎದ್ದುಬಿಟ್ಟರು. ಆವರೆ ತಮ್ಮ ಸಿಟ್ಟನ್ನು ಯಾರ ಮೇಲೆ ತೋರಿಸುವದು? ವರಾನ್ವೇಷಣೆಗೆ ಬಂದ ತಂದೆ ಎಷ್ಟು ನಮ್ರನಾಗಿದ್ದರೂ ಕಡಿಮೆಯೇ.

ಶೀಲೆ, ತಂದೆಯ ಹಾದಿಯನ್ನೇ ಕಾಯುತ್ತ ಕುಳಿತಿದ್ದಳು. ಕೇಶವ ರಾಯರು ಮನೆಗೆ ಬಂದು ಮಗಳಿಗೆ ಸಕಲ ಕತೆಯನ್ನು ಹೇಳಿದರು. ಆ ಸುದ್ದಿಯಿಂದ ಶೀಲೆ ಹತಾಶಳಾಗಿ ಹಾಸಿಗೆಯನ್ನೇ ಹಿಡಿದಳು. ತನ್ನ ಹಿಂದಿನ ದಿನಗಳನ್ನು ಜ್ಞಾಪಿಸಿಕೊಂಡು ಕಣ್ಣೀರನ್ನು ಕೋಡಿಯಾಗಿ ಹರಿಸಿದಳು. ತನ್ನ ಮತ್ತು ವಸಂತನಲ್ಲಿ ನಡೆದ ಪ್ರೇಮದ ಮಾತುಗಳನ್ನು ಜ್ಞಾಪಿಸಿ ಮತ್ತೆಮತ್ತೆ ಅಳುವದು ಅವಳಿಗೆ ಅಭ್ಯಾಸವಾಯಿತು. ನಡುನಡುವೆ ಕೇಶವರಾಯರು " ಬೇರೆ ಚಲೋ ವರ ನೋಡಿ ಮದುವೀ ಮಾಡಿ ಕೊಡ್ತೀನಿ. ವರಗಳಿಗೇನು ಕಡಿಮೆ " ಎಂದು ಮಗಳನ್ನು ಸಾಂತ್ವನಗೊಳಿಸುತ್ತಿದ್ದರು

ಮಾಸಗಳುರುಳುತ್ತಿನ್ದವು. ಹಾಗೆಯೇ ಒಂದು ವರ್ಷ ಕಳೆಯಿತು. ಒಂದು ದಿನ ಅಕಸ್ಮಾತ್ತಾಗಿ, ಶೀಲೆಯ ಹೆಸರಿನ ಪಾಕೀಟೊಂದನ್ನು ಪೋಸ್ಟ ಮನ್ ಕೇಶವರಾಯರ ಕೈಗಿರಿಸಿ ಹೋದ. ಕೇಶವರಾಯರು ಆಶ್ಚರ್ಯ ಚಕಿತರಾಗಿ ಪೋಸ್ಟಿನ ಮುದ್ರೆಯನ್ನು ನೋಡಿದರು. ಅದು ಪರದೇಶದ ಮುದ್ರೆಯಾಗಿತ್ತು. " ಶೀಲಾ " ಎಂದು ಕೇಶವರಾಯರು ಮಗಳನ್ನು ಕೂಗಿದರು.

ಮನೆಗೆಲಸದಲ್ಲಿ ತೊಡಗಿದ ಶೀಲಾ ಒಮ್ಮೆಲೇ ಧಾವಿಸಿ ತಂದೆಯ ಬಳಿಗೆ ಬಂದಳು. ಕೇಶವರಾಯರು ಪಾಕೀಟನ್ನು ಮಗಳ ಕೈಗಿರಿಸುತ್ತ " ನೋಡು, ನಿನ್ನ ಹೆಸರ್ಲೆ ಪಾಕೀಟು ಬಂದದ. ಒಡದು ಓದು. ಯಾರದದ ನೋಡು. ಬಹುಶಃ ವಸಂತಂದು ಅಂತ ಕಾಣಸ್ತದ. " ಶೀಲಾ ಮರುಮಾತಾಡದೇ ಪತ್ರವನ್ನು ನಡುಗುವ ಕೈಗಳಿಂದಲೇ ಒಡೆದು ಓದತೊಡಗಿದಳು.

ಬರ್ಲಿನ ( ಜರ್ಮನಿ )

ಪ್ರಿಯ ಶೀಲೆಗೆ—

ನಿನ್ನ ವಸಂತನ ಪ್ರೇಮಪೂರ್ವಕ ಆಶೀರ್ವಾದಗಳು. ಕರುವಾಯ, ನೀನು ಮತ್ತು ಮಾಮಾ ಇಬ್ಬರೂ ನನ್ನ ಮೇಲೆ ಕೋಪಿಸಿಕೊಂಡಿರಬಹುದು. ಆದರೆ, ನೀವು ಕೋಪಿಸಿಕೊಳ್ಳಬೇಡಿ. ನಾನು ಅಂದು ಐಶ್ವರ್ಯದ ಮದದಲ್ಲಿ

ಏನನ್ನೋ ಮಾಮಾನಿಗೆ ಆಡಿಬಿಟ್ಟೆ. ಈಗ ನನಗೆ ತುಂಬಾ ಪಶ್ಚಾತ್ತಾಪ ವಾಯಿತು. ಮನುಷ್ಯತ್ವದ ಮುಂದೆ ಅಂತಸ್ತು ಗಿಂತಸ್ತು ಎಲ್ಲ ಸುಳ್ಳು ಎಂದು ಮಾಮಾ ಆಡಿದ ಮಾತು ನನ್ನ ಮನಸ್ಸನ್ನು ವಿಚಾರಕ್ಕೆ ಗುರಿ ಮಾಡಿತು. ಈಗ ನಿನ್ನ ಜತೆಯಲ್ಲಿಯೇ ಲಗ್ನವಾಗುವದನ್ನು ನಿರ್ಧರಿಸಿದ್ದೇನೆ. ಮಾಮಾ ನನ್ನ ಮೇಲೆ ತುಂಬಾ ಕೋಪಿಸಿಕೊಂಡಿರಬಹುದೆಂದು, ಪತ್ರವನ್ನು ಅವರಿಗೆ ಬರೆಯದೇ ನಿನಗೆ ಬರೆಯುತ್ತಿದ್ದೇನೆ. ಬಹುಶಃ ನಾಳೆಯೇ ನಮ್ಮ ದೇಶಕ್ಕೆ ತಲುಪಬಹುದು. ಇದೇ ತಿಂಗಳು ಕೊನೆಗೆ ನಾನು ರಜೆಯ ಮೇಲೆ ಊರಿಗೆ ಬರುತ್ತೇನೆ. ಲಗ್ನಕ್ಕೆ ನಿನ್ನ ತಂದೆ ಒಪ್ಪಿದರೆ ಈ ರಜೆಯಲ್ಲಿಯೇ ಲಗ್ನವಾಗಿ ಹೋಗಲಿ. ಆದರೆ ಒಂದು ಮಾತು. ಲಗ್ನ ವೈದಿಕ ಪದ್ಧತಿಯಿಂದಾಗುವದಕ್ಕೆ ನನಗೆ ಸಮ್ಮತವಿಲ್ಲ ರಜಿಸ್ಟರ್ ಪದ್ಧತಿಯಂತೆ ಲಗ್ನವಾಗಬೇಕು. ಮಾಮಾ ಇದಕ್ಕೆ ಒಪ್ಪುತ್ತಾರೋ ಇಲ್ಲವೋ ತಿಳಿಸು.

ಇತಿ ನಿನ್ನವ
ವಸಂತ.

ಓದು ಮುಗಿಸಿದಾಗ ಕೇಶವರಾಯರ ಕಣ್ಣಲ್ಲಿ ಆನಂದ ಬಾಷ್ಪಗಳು ಕಾಣಿಸಿಕೊಂಡುವು. ಶೀಲೆಯೂ ಸದ್ಗದಿತಳಾಗಿಯೇ ಹೇಳಿದಳು:

" ಅಪ್ಪಾ, ವಸಂತ ಅಂಥಾ ಕೆಟ್ಟ ಮನುಷ್ಯ ಅಲ್ಲ ಅನ್ನೋದು ನನಗೆ ಗೊತ್ತಿತ್ತು "

" ಹೌದು, ಯಾರ ಅಕ್ಕನ ಮಗ ಅಂವ " ಎಂದು ಅಭಿಮಾನದಿಂದ ಕೇಶವರಾಯರು ನುಡಿದರು.

ಆ ಮಾತಿನಲ್ಲಿಯೇ ರಜಿಸ್ಟರ ಪದ್ಧತಿಯ ವಿವಾಹಕ್ಕೆ ಅವರ ಸಮ್ಮತಿ ಸಿಕ್ಕು ಹೋಗಿತ್ತು.

ವಸಂತ ಸುಶೀಲೆಯರ ಮದುವೆ ರಜಿಸ್ಟರ ಪದ್ಧತಿಯಿಂದ, ಬೆಳಗಿನಲ್ಲಿಯೇ ಜರುಗಿ ಹೋಗಿತ್ತು. ವಸಂತ ಸೂಟು ಬೂಟಿನಲ್ಲಿಯೇ ತನ್ನ ಕೋಣೆಯನ್ನು ಪ್ರವೇಶಿಸಿ ಮಂಚದ ಮೇಲೆ ಕುಳಿತ. ಗೆಳತಿಯರ ತಂಡ

ಶೀಲೆಯನ್ನು ಎಳೆದುಕೊಂಡು ತಂದು ಅವನ ಕೋಣೆಯಲ್ಲಿ ಬಿಟ್ಟು, ಬಾಗಿಲನ್ನು ಎಳೆದುಕೊಂಡು ನಡೆದರು. ಶೀಲೆ ತನ್ನಷ್ಟಕ್ಕೆ ತಾನೇ ಅಭಿನಂದಿಸಿಕೊಂಡಳು. ಕೊನೆಗಾದರೂ ದೈವ ತನಗೆ ಬೆಂಬಲ ನೀಡಿತೆಂದು ಅವಳಿಗೆ ಸಂತೋಷವಾಗಿತ್ತು. ಅವಳಿಗೆ ಆನಂದ ಅಪರಿಮಿತವಾಗಿತ್ತು. ಆ ಆನಂದ ಭರದಲ್ಲಿ ವಸಂತನ ಬಳಿ ಬಂದು, ಅವನ ಕಾಲಡಿಯಲ್ಲಿಯೇ ಕುಳಿತು, ಅವನ ಬೂಟುಗಳನ್ನು ಬಿಚ್ಚತೊಡಗಿದಳು. ವಸಂತ ನಿಶ್ಚಿಂತನಾಗಿ ಸಿಗಾರೇಟನ್ನು ಎಳೆಯತೊಡಗಿದ್ದ.

ಬೂಟ್ಸುಗಳನ್ನು ಕಳಚುತ್ತಿದ್ದಂತೆ ಶೀಲೆ ಒಮ್ಮೆಲೆ ಹೌಹಾರಿದಳು.

ವಸಂತ ಕರ್ಕಶ ನಗು ನಗುತ್ತ "ಏಕೆ ಅಂಜುತ್ತಿ. ಇದು ಜೋಡಿಸಿದ ಕಾಲು. ಕಟ್ಟಿಗೆಯ ಕಾಲು. ಇದರಿಂದೇನೂ ಅಪಾಯವಿಲ್ಲ. ಮಹಾ ಯುದ್ಧದಲ್ಲಿ ಕಾಲನ್ನು ಕಳೆದುಕೊಂಡೆ. ಅವರ ಬದಲು ಈ ಕಾಲನ್ನು ಕೂಡಿಸಬೇಕಾಯಿತು. ಕಾಲ ಮಹಿಮೆ!"

"ಕಾಲ ಮಹಿಮೆ" ಶೀಲೆ ಅಳುತ್ತ ಮುಖವನ್ನು ಮುಚ್ಚಿಕೊಂಡಳು.

## "ಚಿನ್ನದ ಪದಕ" ದ ಬಗ್ಗೆ ಕೆಲವು ಅಭಿಪ್ರಾಯಗಳು.

"...... ಜೋಶಿಯವರು ವಯಸ್ಸಿನಲ್ಲಿ ಕಿರಿಯವರಾದರೂ ಅನುಭವದಲ್ಲಿ ಹಿರಿಯರೆಂದೇ ಹೇಳಬೇಕು. ಬಾಳಿನ ನಾನಾರಂಗಗಳಲ್ಲಿ ವಿವಿಧ ರೀತಿಯ ಅಮೂಲ್ಯ ಅನುಭವ ಗಳಿಸಿ ಈ ಸುಂದರ ಕೃತಿಯನ್ನು ನಿರ್ಮಿಸಿದ್ದಾರೆ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಮೊದಲನೆಯ ಬಾರಿಗೆ ಇಂಡೋನೇಶಿಯ, ಮಲಯ ಮುಂತಾದ ಹೆಸರುಗಳನ್ನೂ ಅಲ್ಲಿಯ ವರ್ಣನೆಗಳನ್ನೂ ನಾವಿಲ್ಲಿ ಕಾಣುತ್ತೇವೆ. ..........ಶ್ರೀ. ಜೋಶಿಯವರಿಗೆ ಕಂಡದ್ದನ್ನು ಕಂಡ ಹಾಗೆ ಧೈರ್ಯವಾಗಿ ಹೇಳುವ ಕೆಚ್ಚಿದೆ; ಜೀವನವನ್ನು ಆಳವಾಗಿ ನೋಡುವ ಕಣ್ಣಿದೆ; ಕಥೆಯನ್ನು ಸ್ವಾರಸ್ಯವಾಗಿ ಬೆಳಸಿಕೊಂಡು ಹೋಗುವ ಶಕ್ತಿಯಿದೆ. ನಾವು ಈ ಕಥೆಗಳನ್ನು ಓದುತ್ತಿದ್ದರೆ ಅಕ್ಷರಗಳು ಮಾಯವಾಗುವವು, ಓದಿದ ವಿಷಯವನ್ನು ಮಾತ್ರ ಗ್ರಹಿಸುತ್ತೇವೆ ಲೇಖಕರಿಗೂ ಓದುಗರಿಗೂ ಮಧ್ಯ ಇದ್ದ ಗೋಡೆ ಮಾಯವಾಗುವದು. ಇದೇ ಸದಾ ಕಾಲಕ್ಕೂ ಉಳಿಯುವ ಬರೆಹದ ಚಿನ್ಹೆ."

—ಪುಸ್ತಕ ಪ್ರಪಂಚ.

"........ಈ ಏಳು ಕತೆಗಳು ಶ್ರೀ. ವೆಂ ಮ. ಜೋಶಿಯವರ ಕಥನ ಕಲೆಯ ಒಳ್ಳೆ ನಿದರ್ಶನಗಳಾಗಿವೆ. ಕಥಾವಸ್ತುಗಳು ಊರ್ಧ್ವಮುಖಿಯಾಗಿವೆ. ನಿರುದ್ದಿಷ್ಟವಾದ ಒಂದು ಕತೆಯೂ ಇದರಲ್ಲಿ ಸಿಕ್ಕುವದಿಲ್ಲ."

—ಜಯಕರ್ನಾಟಕ.

"........ ಈ ಸಂಗ್ರಹದಲ್ಲಿ ಎಲ್ಲ ಕಥೆಗಳು ಘಟನಾಪ್ರಧಾನವಾಗಿವೆ. ಘಟನೆ, ವರ್ಣನೆ, ಸಂವಾದಗಳನ್ನು ಹವಣಾಗಿ ಹೆಣೆದು ಹೇಳುವ ಕತೆಗಾರಿಕೆ ಕಂಡುಬರುತ್ತದೆ. ಶ್ರೀ. ಜೋಶಿಯವರು ಓದುಗರಲ್ಲಿ ನಿರೀಕ್ಷೆ ಹುಟ್ಟುವಂತೆ ಸ್ವಾರಸ್ಯ ಹೆಚ್ಚುವಂತೆ ಕಥೆಯ ಘಟನೆ, ಹಿನ್ನೋಟ ಮತ್ತು ಅದರ ಸಂದರ್ಭಗಳನ್ನು ನಿರೂಪಿಸುವ ಶೈಲಿಯನ್ನು ಬಳಸಿದ್ದಾರೆ."

—ನಾಗರಿಕ.

**ಚಿನ್ನದ ಪದಕ** ( ವೆಂ. ಮು. ಜೋಶಿ ) **ಸಮರಾಂಗಣದ ಕತೆಗಳು.**



**ಶ್ರೀ. ವೆಂ. ಮು. ಜೋಶಿ.**

೨೬ ವಯಸ್ಸಿನ ಉತ್ಸಾಹೀ ತರುಣರು. ಎರಡನೆಯ ಮಹಾಯುದ್ಧದ ಸಮಯದಲ್ಲಿ ಭಾರತೀಯ ಸೈನ್ಯದಲ್ಲಿ ಸೇರಿ ಮಲಾಯಾ, ಸಿಂಗಾಪುರ ಮೊದಲಾದ ಹೊರನಾಡುಗಳಿಗೆ ಹೋಗಿಬಂದಿದ್ದಾರೆ, ಚಿಕ್ಕಂದಿನಿಂದಲೂ ಸಾಹಿತ್ಯದಲ್ಲಿ ಅಭಿರುಚಿಯುಳ್ಳವರು. ಸೈನ್ಯ ಖಾತೆಯಿಂದ ಹೊರಬಂದ ನಂತರ ಕನ್ನಡಿಗರಿಗೆ ಉದಯೋನ್ಮುಖ ಕತೆಗಾರರೆಂದು ಪರಿಚಿತರಾಗಿದ್ದಾರೆ. ಇವರ ಮೊದಲನೆಯ ಕಥಾಸಂಗ್ರಹ "ಚಿನ್ನದ ಪದಕ" ಎಲ್ಲರಿಂದಲೂ ಮನ್ನಣೆ ಹೊಂದಿದೆ.